# ತರಂಗಿಣೀ

(ವಿವಿಧ ಕಥಾ ಮಾಸ ಪುಸ್ತಕಾವಳಿ)

---

# ಪ್ರೇಮಪಾಶ

ಬಾಲಸರಸ್ವತಿಯವರಿಂದ
ವಿರಚಿತವಾದುದು.

ಪ್ರಥಮ ಮುದ್ರಣ, ೧೦೦೦ ಪ್ರತಿಗಳು.

PRINTERS,
**Sarada Vilasa Press,**
Bangalore City.

ರಾ॥ ಸಂ॥ ಆಶ್ವಯುಜ          ಕ್ರಯ ೩ ಆಣೆ.

# ವಿಜ್ಞಾಪನೆ.

ಪ್ರೇಮಪಾಶವೆಂಬುದು ನಿತ್ಯಸಂಸಾರದಲ್ಲಿ ಪದೇ ಪ-ಕಾಣ್ಬರುವ ಅನೇಕ ಘಟನಾವಳಿಗಳಲ್ಲಿ ಒಂದನ್ನು ಮಾತ್ರ ಅವಲಂಬಿ ರಚಿತವಾಗಿರುವುದು. ಇದರಲ್ಲಿ ಸಮಾಜವು ಸಂಸಾರದ ಮೇಲೆ ಎಷ್ಟು ಮಟ್ಟಿಗೆ ಆಧಿಪತ್ಯ ಮಾಡುವುದೆಂಬುದು ಸ್ಪಷ್ಟವಾಗಿ ವರ್ಣಿಸಲ್ಪಡುವದು. ಸಂಘದಲ್ಲಿಯೂ, ದ್ರವ್ಯದಲ್ಲಿಯೂ, ಅಧಿಕಾರದಲ್ಲಿಯ ಅಪರಿಮಿತವಾದ ಶಕ್ತಿಯಿದ್ದರೂ, ವಿಧಿಯು ಧರ್ಮಚ್ಯುತಿಯನ್ನು ಮಾತ್ರ ಎಂದಿಗೂ ಸಹಿಸಲಾರದು. ಪ್ರಾರಂಭದಲ್ಲಿ ಅಧರ್ಮ ತಾನೇ ತಾನಾಗಿ ವಿಜೃಂಭಿಸಿ ಅತ್ಯಾಚಾರಗಳನ್ನೆಸಗಿದರೂ, ಪರಿಣಾಮದಲ್ಲಿ ಧರ್ಮವೇ ಜಯಿಸುವುದು, ಧರ್ಮವೇ ಜಗತ್ತನ್ನು ಬೆಳಗಿ ತ್ರಿಕಾಲದಲ್ಲಿಯೂ ಧಾರ್ಮಿಕನಿಗೆ ಶಾಶ್ವತವಾದ ಸುಖಸಂಪತ್ತನ್ನು ಕಾಪಿಡುವುದು, ಎಂಬುವುದರಲ್ಲಿ ಈ ಪ್ರೇಮಪಾಶವು ದಿಗ್ಪ್ರದರ್ಶನವಾಗಿರುವುದರಿಂದ ಸರ್ವರೂ ಇದನ್ನು ಆದರ ಸ್ವೀಕರಿಸುವುದಾದರೆ ನನ್ನ ಶ್ರಮವು ಸಾರ್ಥಕವಾಗುವುದು.

ಇತಿ, ಬಾಲಸರಸ್ವತೀ.

ಜಯತು ಭಗವಾನ್

# ಪ್ರೇಮಪಾಶ.



## ಒಂದನೆಯ ಸಂಧಿ.

ಅನಂತಪುರದ ದಕ್ಷಿಣ ದಿಕ್ಕಿನ ಕಡೆ ಅಂದವಾಗಿ ಕಟ್ಟಲ್ಪಟ್ಟಿದ್ದ ಒಂದು ಮನೆಯ ಕೋಣೆಯೊಂದರಲ್ಲಿ ಪರಮ ಸುಂದರಿಯಾದ ಹದಿನಾಲ್ಕು ವರುಷ ವಯಸ್ಸುಳ್ಳ ಬಾಲೆಯೊಬ್ಬಳು ಕುಳಿತುಕೊಂಡು ಒಂದು ಪತ್ರವನ್ನು ಬರೆಯುತ್ತಿದ್ದಳು. ಆ ಬಾಲೆಯನ್ನು ಸಾಕ್ಷಾತ್ತಾಗಿ ನೋಡಿದ ಮಹನೀಯರು ,, ಸರ್ವಾಂಗ ಸುಂದರಿ; ತ್ರಿಪುರ ಸುಂದರಿ; ತ್ರೈಲೋಕ್ಯ ಸುಂದರಿ '' ಇತ್ಯಾದಿ ನಾಮಗಳಿಂದ ವರ್ಣನೆಮಾಡಿರುವರು. ಅವರಂತೆಯೇ ನಾವೂ ಅರ್ಥವಿಲ್ಲದ ಶಬ್ದಗಳನ್ನು ಪ್ರಯೋಗಿಸಿ ಸ್ತ್ರೀಯರನ್ನು ವರ್ಣನೆಮಾಡಲು ಇಷ್ಟವುಳ್ಳವರಾಗಿಲ್ಲ. ನಮ್ಮ ಕಥಾನಾಯಕಿಯಾದ ಬಾಲೆಯು ಲಾವಣ್ಯವೆಂಬ ಮಹಾಸಾಗರದಲ್ಲಿ ಕಂಠಪರ್ಯಂತ ಸ್ನಾನಮಾಡಿ ಅವಗಾಹನಸ್ನಾನಕ್ಕೆ ಕಾಲವನ್ನು ನಿರೀಕ್ಷಿಸುತ್ತಿದ್ದಳು. ಕಾಲವಾದರೋ ಯಾರನ್ನೂ ನಿರೀಕ್ಷಿಸುದಿಲ್ಲ ಪರಮಾತ್ಮನ ಮಹಿಮೆಯ ಬಲದಿಂದ ನಿರಂತರವೂ ಚಕ್ರದಂತೆ ಸುತ್ತುತ್ತಿರುವ ಕಾಲವು ಚರಾಚರಾತ್ಮಕವಾದ ಪ್ರಪಂಚದ ಮೇಲೆ ಯಾವಾಗಲೂ ಏಕಾಧಿಪತ್ಯ ಮಾಡುತ್ತಲೇ ಇರುವುದು. ಕಾಲದ ಆಧಿಪತ್ಯಕ್ಕೆ ಒಳಗಾಗಿರುವ ಮಾನವನು ಕಾಲವನ್ನು ನಿರೀ

ಕ್ಷಿಸಬೇಕಾದುದೇ ಧರ್ಮವು. ಕಾಲವು ಸತ್ಪ್ರಭವಿಸುತ್ತ ತನ್ನನ್ನು ನಿರೀಕ್ಷಿಸುವವರ ಯೋಗಕ್ಷೇಮವನ್ನು ವಹಿಸಿ ಬೇಡುವವರಿಗೆ ಅನಂತಫಲವನ್ನು ಕೊಡುವುದು ಪುರಾಣೇತಿಹಾಸಗಳಲ್ಲಿ ಇದಕ್ಕೆ ಸಾಕಾದಷ್ಟು ನಿದರ್ಶನಗಳು ನಮ್ಮ ಗೋಚರಕ್ಕೆ ಬಂದಿರುವುವು. ಪ್ರಕೃತ ಎಲ್ಲರಿಗೂ ತಿಳಿದಿರುವ ಕಾಲದ ವಿಷಯವನ್ನು ಕುರಿತು ನಾವಿಲ್ಲಿ ವಿವರಿಸಬೇಕಾದುದಿಲ್ಲ. ಭವಿಷ್ಯತ್ಕಾಲವು ವರ್ತಮಾನಕಾಲವೆನಿಸಿ ಭೂತಕಾಲವಾಗಿ ಪರಿಣಮಿಸುವುದರಿಂದ ನಮ್ಮ ಬಾಲೆಗೆ ಭವಿಷ್ಯತ್ಕಾಲದಲ್ಲಿದ್ದ ಪರ್ವಕಾಲವು ವರ್ತಮಾನಕಾಲವಾಗುವುದರಲ್ಲಿದ್ದಿತು. ಇಂತಹ ನಮ್ಮ ಕಥಾನಾಯಕಿಯು ತನ್ನ ಕಿರುಮನೆಯಲ್ಲಿ ಕುಳಿತು ಕಾಗದವನ್ನು ಬರೆಯುತ್ತಿದ್ದಳು. ಮಧ್ಯೇ ಮಧ್ಯೇ ಕಣ್ಣುಗಳಿಂದ ಹರಿದುಬರುತ್ತಿದ್ದ ಕಂಬನಿಗಳನ್ನು ಸೀರೆಯ ಸೆರಗಿನಿಂದ ಒರಸಿಕೊಳ್ಳುತ್ತಾ ಸುಂದರಿಯು ಕಾಗದವನ್ನು ಅತಿ ಪ್ರಯಾಸದಿಂದ ಬರೆದು ಮುಗಿಸಿದಳು. ಬಳಿಕ ಆಕೆಯು ಆ ಕಾಗದವನ್ನು ತನ್ನ ಪೆಟ್ಟಿಗೆಯ ಮೇಲಿಟ್ಟು, ಮಂಚದ ಮೇಲೆ ಹಾಸಿಗೆಯ ಕಡೆ ಮುಖವನ್ನು ಮಾಡಿ ಮಲಗಿಕೊಂಡು ಗಳಗಳ ಅಳತೊಡಗಿದಳು. ಆಸಮಯಕ್ಕೆ ಸರಿಯಾಗಿ ಪರಮಸುಂದರನಾದ ಯುವಕನೊಬ್ಬನು ಆಕೆಯ ಮಂಚದ ಹತ್ತಿರ ನಿಶ್ಶಬ್ದವಾಗಿ ಬಂದು ನಿಂತನು. ಆತನು ಬಂದುದು ಆಕೆಗೆ ಗೊತ್ತಾಗಲಿಲ್ಲ. ಆಗಂತುಕನು ಮಂಚದ ಹತ್ತಿರ ನಿಂತು ಸುತ್ತಲೂ ನೋಡಿದನು. ಕೈ ಪೆಟ್ಟಿಗೆಯ ಮೇಲೆ ಒಂದು ಕಾಗದವು ಬರೆದಿಡಲ್ಪಟ್ಟಿದ್ದುದು ಅತನ ಕಣ್ಣಿಗೆ ಗೋಚರವಾಯಿತು. ಆ ಕಾಗದದ ಶಿರೋನಾಮವನ್ನು ನೋಡಿದ ಕೂಡಲೇ, ಆಗಂತುಕನು ದಿಕ್ಕುತೋರದವನಾಗಿ ಸ್ನೇಹಪೂರಿತವಾದ ಸ್ವರದಿಂದ “ ಲೀಲಾವತಿ ” ಎಂದು ಕೂಗಿದನು.

ಲೀಲಾವತಿಯು ಬೆಚ್ಚಿಬಿದ್ದವಳಾಗಿ ಎದ್ದುನಿಂತು, ಶರೀರದ ಮೇಲೆ ಅಕ್ರಮವಾಗಿ ಬಿದ್ದಿದ್ದ ಕೇಶರಾಶಿಯನ್ನು ಕೈಗಳಿಂದ ಸರಿಪಡಿಸಿಕೊಳ್ಳುತ್ತಾ ಆಗಂತುಕನನ್ನು ಒಂದು ಸಲ ದೃಷ್ಟಿಸಿನೋಡಿದಳು. ಆಗಂತುಕನೂ ಆಕೆಯ ದೃಷ್ಟಿಯಲ್ಲಿ ತನ್ನ ದೃಷ್ಟಿಯನ್ನು ಸೇರಿಸಲಾಗಿ, ಲೀಲಾವತಿಯು ನಾಚಿಕೆಯಿಂದ ತಲೆಯನ್ನು ಬಗ್ಗಿಸಿಬಿಟ್ಟಳು. ಯುವಕನು ಲೀಲಾವತಿಯ ಗಲ್ಲವನ್ನು ಹಿಡಿದೆತ್ತಿ, ಲೀಲಾ! ನೀನೊಬ್ಬಳೇ ಇಲ್ಲಿ ಕುಳಿತುಕೊಂಡು ಏನನ್ನು ಯೋಚಿಸುತ್ತಿರುವೆ? ಎಂದನು. ಲೀಲಾವತಿಯು ಯುವಕನ ಮಾತಿಗೆ ಯಾವ ಉತ್ತರವನ್ನೂ ಕೊಡದೆ ಪೆಟ್ಟಿಗೆಯ ಮೇಲಿಟ್ಟಿದ್ದ ಕಾಗದವನ್ನು ಕೈಗೆ ತೆಗೆದುಕೊಳ್ಳುವ ಯತ್ನಮಾಡತೊಡಗಿದಳು. ಇದನ್ನು ನೋಡಿ, ಯುವಕನು, ಇದು ಯಾರ ಕಾಗದ ಲೀಲಾ? ಎಂದು ಕೇಳಿದನು.

ಲೀಲಾವತಿ—ಇದು ಯಾರ ಕಾಗದವೂ ಅಲ್ಲ. ತಾವು ಕುಳಿತುಕೊಳ್ಳೋಣಾಗಲಿ.

ಯುವಕ—ಲೀಲಾ! ಇಂದು ನಾನು ನಿನ್ನನ್ನು ನೋಡಿದರೆ ನಿನ್ನ ಮೊದಲಿನ ಸರಳತೆಯೂ, ಮಾಧುರ್ಯವೂ, ಪ್ರಫುಲ್ಲತೆಯೂ ಎಲ್ಲಿಯೋ ಮಾಯವಾಗಿರುವಂತೆ ತೋರುವುದು. ಬಹುಶಃ ನನ್ನನ್ನು ನಿನ್ನ ಹೃದಯದಿಂದ ದೂರಮಾಡುವುದಕ್ಕೆ ತಕ್ಕ ಪ್ರಯತ್ನವು ನಡೆದಿರುವಂತೆ ನನಗೆ ಬೋಧೆಯಾಗುವುದು.

ಲೀಲಾ—ನನಗೆ ಗೊತ್ತಿಲ್ಲ.

ಯುವಕ—ನಿನಗೆ ಗೊತ್ತಿಲ್ಲದೇ ಇರಬಹುದು. ಈ ಕಾಗದ ಯಾರಿಗೆ ಬರೆದಿರುವೆ?

ಲೀಲಾ—ಆ ಕಾಗದದ ವಿಷಯವನ್ನು ಕಟ್ಟಿಕೊಂಡು ತಾವೇನು ಮಾಡುವಿರಿ?

ಯುವಕ—ಈ ಕಾಗದದ ಮೇಲೆ ನನ್ನ ಹೆಸರಿರುವುದು.

ಲೀಲಾ—ಇರಬಹುದು. ಆದರೆ—

ಯುವಕ—ಆದರೆ, ಏನು? ಆ ಕಾಗದವನ್ನು ನೋಡುವುದಕ್ಕೆ ನನಗೆ ಹಕ್ಕಿರುವುದು.

ಲೀಲಾ—ನಾನು ಅದನ್ನು ತೋರಿಸುವುದಿಲ್ಲ.

ಯುವಕ—ಹಾಗಾದರೆ ಅದರಲ್ಲಿ ಬರೆದಿರುವ ವಿಷಯವನ್ನಾದರೂ ಬಾಯಿಂದಲೇ ಹೇಳಿಬಿಡು. ಕಾಗದವನ್ನು ನೋಡುವುದರಿಂದ ನನಗೆ ಬರುವ ಭಾಗ್ಯವೇನು?

ಲೀಲಾ—ಕಾಗದದಲ್ಲಿ ಏನೂ ಬರೆದಿಲ್ಲ.

ಯುವಕ—ಕಾಗದದಲ್ಲಿ ವಿಷಯವು ಬರೆದಿರಲಿ, ಬರೆಯದಿರಲಿ, ಅದರಿಂದ ನನಗಾಗುವುದೇನು? ಕಾಗದದ ಮೇಲೆ ನನ್ನ ಹೆಸರಿರುವುದರಿಂದ ಅದು ನನಗೇ ಸೇರಬೇಕು. ನನ್ನ ಕಾಗದವನ್ನು ನೀನು ತೋರಿಸುವುದಿಲ್ಲವೆನ್ನಲು ಕಾರಣವೇನು?

ಲೀಲಾ—ಕಾಗದವಾದರೋ ನಿಮ್ಮದೇ ಅಹುದು ಆದರೆ, ಈಗ ಅದನ್ನು ನಿಮಗೆ ಕೊಡುವುದರಿಂದ ಪ್ರಯೋಜನವೇನೂ ಕಂಡು ಬರುವುದಿಲ್ಲ.

ಯುವಕ—ಪ್ರಯೋಜನವಿಲ್ಲದಮೇಲೆ, ಕಾಗದವನ್ನು ನೀನು ಬರೆದುದೇತಕ್ಕೆ?

ಲೀಲಾ—(ಅಪ್ರತಿಭಳಾಗಿ) ನಾನು ಈ ಕಾಗದವನ್ನು ನಿಮಗಾಗಿಯೇ ಬರೆದಿರುವೆನು. ನೀವು ಈ ಕಾಗದವನ್ನು ನೋಡಬಹುದು. ಆದರೆ ಇದನ್ನು ಈಗಲೇ ಓದದೆ ಕಾಲಾಂತರದಲ್ಲಿ ಓದುವುದಾದರೆ ನಾನು ಪ್ರಕೃತ ವ್ಯಸನದಿಂದ ಮುಕ್ತಳಾಗುವ ಸಂಭವವುಂಟು. ತಾವು ದೊಡ್ಡಮನಸ್ಸುಮಾಡಿ ನನ್ನ ಪ್ರಾರ್ಥನೆಯನ್ನು ನೆರವೇರಿಸಿಕೊಡಬೇಕು.

ಯುವಕನು ಆ ಕಾಗದವನ್ನು ತೆಗೆದುಕೊಂಡು—ಲೀಲಾ ! ಕಾಗದವನ್ನು ಓದುವ ಕುತೂಹಲವು ನನಗೆ ಬಹಳವಾಗಿರುವುದ ರಿಂದ, ನಾನು ಈಗಲೇ ಮನೆಗೆ ಹೊರಡುವೆನು, ಎಂದು ಹೇಳಿ ಲೀಲಾವತಿಯ ಕೋಣೆಯಿಂದ ಹೊರಗೆ ಹೊರಟನು. ಯುವಕನು ಹೊರಟುಹೋಗುತ್ತಿರುವುದನ್ನು ಲೀಲೆಯು ನೋಡಿ—ವಿನಯ ಕುಮಾರ ! ನಾನು ಕಾಗದದಲ್ಲಿ ಬರೆದಿರುವುದನ್ನು ಉಪೇಕ್ಷೆಮಾಡ ಲಾಗದು ; ಒಂದುವೇಳೆ ಮನಸ್ಸಿಗೆ ವಿಶೇಷವಾದ ವಿಷಾದವೇನಾದರೂ ಉಂಟಾಗುವುದಾದರೆ ಅದನ್ನು ಗಣನೆಗೆ ತಾರದಿರಬೇಕೆಂಬುದೇ ಬಾಲೆಯಾದ ನನ್ನ ಪ್ರಾರ್ಥನೆ—ಎಂದು ಹೇಳಿ ಸುಮ್ಮನಾದಳು. ವಿನಯಕುಮಾರನು ಲೀಲಾವತಿಯ ಮಾತಿಗೆ ಯಾವ ಉತ್ತರವನ್ನೂ ಕೊಡದೆ ತನ್ನ ಮನೆಯಕಡೆಗೆ ತೆರಳಿದನು.

ವಿನಯನು ಏನಾದರೂ ಯೋಚಿಸುತ್ತಾ ಮನೆಗೆ ಬಂದು ಸೇರಿದನು. ಅಷ್ಟು ಹೊತ್ತಿಗೆ ಸೂರ್ಯದೇವನೂ ಪಶ್ಚಿಮಾಚಲವನ್ನು ಕುರಿತು ತೆರಳಿದ್ದನು. ಸಂಧ್ಯಾಕಾಲದಿಂದ ದಿಙ್ಮಂಡಲವು ಅಪೂರ್ವ ಶೋಭಾರಾಶಿಯನ್ನು ಬೀರುತಿದ್ದಿತು. ವಿನಯಕುಮಾರನಿಗೆ ಮಾತ್ರ ಸಂಧ್ಯಾಕಾಲವು ಸಮೀಪವಾದುದು ಗೊತ್ತಾಗಲೇ ಇಲ್ಲ. ಅವನ ಹೃದಯವೆಂಬ ಆಕಾಶದಲ್ಲಿ ಘೋರತರವಾದ ಸಂಧ್ಯೆಯು ಏಕಾಧಿಪ ತ್ಯಮಾಡುತಿದ್ದುದರಿಂದ, ವಿನಯನಿಗೆ ಬಾಹ್ಯಪ್ರಪಂಚದ ಸಂಧ್ಯೆಯು ಅಷ್ಟಾಗಿ ಗೋಚರಕ್ಕೆ ಬರಲಿಲ್ಲ. ವಿನಯನು ಮನೆಗೆ ಬಂದು ತನ್ನ ಕೋಣೆಯಲ್ಲಿ ಉರಿಯುತ್ತಿದ್ದ ದೀಪದಮುಂದೆ ಕುಳಿತು ಲೀಲಾವತಿ ಯ ಕಾಗದವನ್ನು ಬಿಚ್ಚಿದನು. ಆಗ ಅವನಿಗೆ ಕಾಗದವನ್ನು ಪೂ ರ್ಣವಾಗಿ ಓದುವಷ್ಟು ಸಹನವಿರಲಿಲ್ಲ ; ಆದರೂ ಆ ಕಾಗದವನ್ನು ಒಂದು ಸಲ, ಎರಡು ಸಲ, ಮೂರು ಸಲ ಓದಿದನು. ಮತ್ತೊಂದು

ಸಲ ಗಟ್ಟಿಯಾಗಿ ಓದಿದೆನು. ಅವರಲ್ಲಿ ನಮಗೆ ತಿಳಿದುಬಂದ ಸಂಗತಿಯನ್ನು ಇಲ್ಲಿ ಬರೆಯುವೆವು.

‘ ವಿನಯಕುಮಾರ !

‘ ತಮಗೆ ನಾನು ಕಾಗದವನ್ನು ಏನೆಂದು ಬರೆಯಲಿ ? ನಾನು ಏನನ್ನು ಬರೆಯಬೇಕೆಂದು ಯೋಚಿಸಿದ್ದೆನೋ ಅದನ್ನು ಬರೆಯಲಾರದವಳಾಗಿರುವೆನು. ಬರೆಯಬೇಕೆಂಬ ಅಂಶವನ್ನು ನಾನು ಬರೆಯಲಾರದವಳಾದರೂ, ಮನದಲ್ಲಿಯೇ ಇಟ್ಟುಕೊಳ್ಳಲಾರದವಳಾಗಿರುವೆನು. ಕಾಗದವನ್ನು ಬರೆಯಲೋ, ಬೇಡವೋ ಎಂದು ಒಂದು ವಾರದಿಂದಲೂ ಯೋಚಿಸಿ ಯೋಚಿಸಿ, ಈಗ ದೃಢಮಾಡಿಕೊಂಡು ನನ್ನ ಮನೋಗತವನ್ನು ನಿಮಗೆ ತಿಳಿಸುವೆನು.

‘ ಸ್ವಾಮಿನ್ ! ಈ ಜನ್ಮದಲ್ಲಿ ನಾನು ನಿಮ್ಮವಳಾಗಲಾರೆನು ; ನೀವೂ ನನ್ನವರಾಗಲಾರಿರಿ. ಈ ವಿಕಸಿತವಾದ ಎರಡು ಕುಸುಮಗಳೂ ಏಕತ್ರ ಪ್ರಕಾಶಿತವಾಗುವದು ಜಗದೀಶ್ವರನ ಇಷ್ಟದಲ್ಲಿಲ್ಲ. ಸಂಸಾರದಲ್ಲಿನ ಅವ್ಯಾಹೃತವಾದ ಸುಖಕ್ಕೂ ಶೋಭೆಗೂ ನಾವಿಬ್ಬರು ಮಾತ್ರ ಸೃಷ್ಟರಾಗಿಲ್ಲ. ನಿಮ್ಮನ್ನು ಮದುವೆಮಾಡಿಕೊಂಡು ನಿಮ್ಮ ಚರಣಸೇವೆಮಾಡುವುದು ನನ್ನ ಹಣೆಯಲ್ಲಿ ಬರೆದಿಲ್ಲ ; ನನ್ನ ಸೇವೆಯಿಂದ ಸುಖಪಡುವುದು ನಿಮ್ಮ ಅದೃಷ್ಟದಲ್ಲಿಲ್ಲ. ಇದಕ್ಕೆ ದಾರುಣವಾದ ಬಹಿಷ್ಕಾರದ ಭೀತಿಯೇ ಕಾರಣವು. ಇಂದು ನೀವು ನನ್ನನ್ನು ವಿವಾಹಮಾಡಿಕೊಳ್ಳುವುದಾದರೆ, ನಾಳೆ ನಿಮ್ಮ ಜಾತಿಯು ಹೋಗುವುದಂತೆ ವಿವೇಕವಿಲ್ಲದ ಜನರು ಬಹಿಷ್ಕೃತರೊಡನೆ ಆಹಾರವ್ಯವಹಾರಗಳ ಮಾತು ಹಾಗಿರಲಿ, ಮಾತನ್ನು ಕೂಡ ಆಡುವುದಕ್ಕೆ ಇಷ್ಟಪಡರು. ಇದರಿಂದ ನಿಮಗೆ ಅನೇಕ ತೊಂದರೆಗಳುಂಟಾಗಬಹುದು. ಒಂದುವೇಳೆ ನಾವು ಈ ಸಂಕಟವನ್ನು ಅನುಭವಿಸುವುದಕ್ಕೆ ಸಿದ್ಧರಾ

ಗಿದ್ದರೂ, ವಿನಾಶದ ಪರಿಣಾಮವು ದುರಂತವಾದ ವಿಪತ್ತನ್ನು ಸೂಚಿಸುವುದು. ಆದರೆ-ನಾವು ಈ ಸಂಕಟವನ್ನು ಅನುಭವಿಸುವುದಲ್ಲದೆ, ನಮ್ಮ ಪುತ್ರ ಪೌತ್ರರು ಆದಿಯಾಗಿ ಈ ಬಹಿಷ್ಕಾರವೆಂಬ ಅವಿವೇಕದ ಫಲವನ್ನು ಅನುಭವಿಸಬೇಕಾಗುವುದು. ಆದುದರಿಂದ ನಾನು ಇದೆಲ್ಲವನ್ನೂ ಯೋಚಿಸಿ ನಮ್ಮಗಳ ಪರಸ್ಪರ ಸಂಬಂಧದಲ್ಲಿ ಆಶೆಯನ್ನು ತ್ಯಾಗಮಾಡಿರುವೆನು. ನೀವೂ ಆಶೆಯನ್ನು ತ್ಯಾಗಮಾಡುವುದು ಲೇಸು.

‘ ಸ್ವಾಮಿನ್ ! ತಾವು ನನ್ನನ್ನು ಆಂತರ್ಯದಲ್ಲಿ ಪ್ರೀತಿಸುವಿರೆಂಬುದನ್ನು ನಾನು ಚೆನ್ನಾಗಿಯೂ ಬಲ್ಲೆನು ನಾನು ತಮ್ಮ ಹೃದಯವನ್ನು ತಿಳಿದುಕೊಳ್ಳದಿದ್ದರೆ ಚೆನ್ನಾಗಿರುತ್ತಿದ್ದಿತು ನಾನು ಹೀಗೆ ಹೇಳುವುದರಿಂದ, ನೀವು ನನ್ನನ್ನು ಪ್ರೀತಿಸುವಂತೆ ನಾನು ನಿಮ್ಮನ್ನು ಪ್ರೀತಿಸುವುದಿಲ್ಲವೆಂದು ಮಾತ್ರ ತಿಳಿಯಕೂಡದು. ನಾನು ಪ್ರೀತಿಸುವುದೂ, ಇಲ್ಲದ್ದೂ ನಿಮಗೆ ಗೊತ್ತಿಲ್ಲವೇ ? ಈ ಲೋಕದಲ್ಲಿ ನನಗೆ ಸ್ಪೃಹಣೀಯವಾದ ಪದಾರ್ಥವು ಇರುವುದೆನ್ನುವುದಾದರೆ ಅದು ತಾವು ; ಆನಂದಕ್ಕೆ ಕೇಂದ್ರಸ್ಥಾನವು ಉಂಟೆನ್ನುವುದಾದರೆ ಅದು ತಾವು ; ಪರದೈವವು ಬಾಳಿರುವುದೆಂದು ಒಪ್ಪಿಕೊಳ್ಳುವುದಾದರೆ ಅದೇ ತಾವು ; ನನಗೆ ತಾವು ದೇವತಾದುರ್ಲಭವಾದ ಸಾಮಗ್ರಿಯೆಂದು ಹೇಳುವ ಮಾತು ಅತ್ಯುಕ್ತಿಯಲ್ಲ. ಇಂತಹ ಅಮಾನುಷವಾದ ಗುಣಗಳುಳ್ಳ ತಮಗೆ ನನ್ನಲ್ಲಿ ಸ್ಥಳವು ದೊರೆಯಲಾರದೆಂದು ನಾನು ಒರೆಯುವುದರಿಂದ ನಿಮ್ಮ ಮನವು ತಲ್ಲಣಿಸುವುದು. ನಾನು ಬಲ್ಲೆನು. ಆದರೆ ಯತ್ನವಿಲ್ಲ. ನೀವು ನಿಮ್ಮ ಮನಸ್ಸನ್ನು ಕಲ್ಲಾಗಿ ಮಾಡಿರಿ. ನಾನಾದರೋ ಅಂತರ್ಬಹಿಶ್ಚ ಪಾಷಾಣಮೂರ್ತಿಯಾಗಿರುವೆನು.

'ಸ್ವಾಮಿನ್ ! ಮನಸ್ಸನ್ನು ಕಲ್ಲಾಗಿ ಮಾಡಿರೆಂದು ನಾನು ಹೇಳುವೆನು, ಆದರೆ ಅದು ಅಸಾಧ್ಯವಾದುದೇ ಸರಿ. ನನ್ನ ಪ್ರಾರ್ಥನೆಯಿಂದ ತಾವು ಯಾವ ಕೆಲಸವನ್ನು ಮಾಡಿಲ್ಲ? ನನಗೋಸ್ಕರವಾಗಿ ತಾವು ಯಾವ ಕಷ್ಟವನ್ನು ತಾನೇ ಅನುಭವಿಸಿಲ್ಲ? ತಾವು ಇದೆಲ್ಲವನ್ನೂ ನನಗೆ ಸುಖವಾಗುವುದೆಂಬ ಸಂತೋಷದಿಂದ ಕಷ್ಟವನ್ನಾಗಿ ಎಣಿಸದೇ ಹೋದುದನ್ನು ನಾನು ಎಂದಿಗಾದರೂ ಮರೆಯಬಲ್ಲೆನೇ? ನಾನು ಇದೆಲ್ಲವನ್ನೂ ನಿಮ್ಮ ಮುಖೋಲ್ಲಾಸಕ್ಕಾಗಿ ಬರೆಯುವೆನೆಂದು ಮಾತ್ರ ತಿಳಿಯಕೂಡದು. ನಾನು ತಮ್ಮಲ್ಲಿ ಯಥಾರ್ಥವಾಗಿರುವೆನೆಂದು ತಾವು ತಿಳಿದರೆ, ನಾನು ಸಂತೋಷದಿಂದಿರುವೆನು. ತಾವು ನನ್ನನ್ನು ಸುಖವಾಗಿರುವಂತೆ ಮಾಡಕೂಡದೇತಕೆ?

'ಸ್ವಾಮಿನ್ ! ನಾನು ತಮಗೆ ಮತ್ತೊಂದು ವಿಷಯವನ್ನು ತಿಳಿಸುವೆನು. ಈ ಪಾಪಪೂರಿತವಾದ ಭೂಮಿಯು ನಮ್ಮ ಪವಿತ್ರವಾದ ಪ್ರೀತಿಗೆ ಸ್ಥಾನವಲ್ಲ. ಈ ಲೋಕವಲ್ಲದೆ ನಮಗೆ ಪರಲೋಕವೊಂದಿರುವುದು, ಅಲ್ಲಿ ಬಹಿಷ್ಕಾರದ ಭಯವಿಲ್ಲ, ಕಾಪಟ್ಯವಿಲ್ಲ, ಪಾಪವಿಲ್ಲ, ದ್ವೇಷಾಸೂಯೆಗಳಿಲ್ಲ, ಎಂದು ತಾವು ನನಗೆ ಪದೇಪದೇ ತಿಳಿಸುತಿದ್ದಿರಿ. ಈಗ ನಾವಿಬ್ಬರೂ ಆ ಪವಿತ್ರವಾದ ಸ್ಥಾನಕ್ಕೆ ಹೋಗಿ ನಮ್ಮ ಪವಿತ್ರವಾದ ಪ್ರೀತಿಯನ್ನು ಉಪಯೋಗಿಸೋಣ. ನಾವು ಅಲ್ಲಿಗೆ ಹೊರಟುಹೋದಮೇಲೆ, ಇಲ್ಲಿಗೆ ಮತ್ತೆ ಬರುವ ಯೋಚನೆಯನ್ನೇ ತ್ಯಾಗಮಾಡೋಣ. ಇಲ್ಲಿ ನಮ್ಮ ಉದ್ದೇಶವು ನೆರವೇರುವಹಾಗಿಲ್ಲ. ಆದುದರಿಂದ ವ್ಯರ್ಥವಾದ ಆಶೆಯನ್ನು ತಾವು ಇಟ್ಟುಕೊಳ್ಳಬೇಡಿರಿ. ಈ ಪ್ರಪಂಚದಲ್ಲಿ ನಾವಿಬ್ಬರೂ ದಂಪತಿಗಳಾಗಿರುವುದು ವಿಶ್ವವಿಧಾತನ ಇಷ್ಟವಲ್ಲಿಲ್ಲವೆಂದು ತೋರುವುದು.

'ಸ್ವಾಮಿನ್ ! ತಾವು ನನ್ನ ವಿಷಯದಲ್ಲಿ ಯೋಚಿಸಿ ಕೊರಗ

ಬೇಕಾದ್ದಿಲ್ಲ. ತಾವು ಸುಖವಾಗಿದ್ದರೆ, ನಾನೂ ಸುಖವಾಗಿರುವೆನು. ತಾವು ನನ್ನ ಸಂಬಂಧವಮಾಡದಿದ್ದರೆ, ತಮಗೆ ಮಂಗಳವುಂಟೆಂದು ನಾನು ಬಲ್ಲೆನು. ತಮಗೆ ಮಂಗಳವನ್ನುಂಟು ಮಾಡುವುದಕ್ಕಿಂತಲೂ ನನಗೆ ಬೇರೆ ಕೆಲಸವಾವುದು ? ತಮ್ಮ ಪ್ರೇಮಕ್ಕಾಗಿಯೇ ನಾನು ನನ್ನ ಹೃದಯವನ್ನು ಲೋಹದಂತೆ ಕಠಿಣವಾಗಿಯೂ, ಕಲ್ಲಿನಂತೆ ದುರ್ಭೇದ್ಯವಾಗಿಯೂ, ವಜ್ರಾಯುಧಕ್ಕಿಂತಲೂ ಭಯಂಕರವಾಗಿಯೂ ಮಾಡಿಕೊಂಡು, ತಮಗೆ ಈ ಕಾಗದವನ್ನು ಬರೆದಿರುವೆನು. ನಾನು ಈ ಕಾಗದವನ್ನು ಇಷ್ಟಪಟ್ಟು ಸಂತೋಷದಿಂದ ಬರೆದಿರುವುದರಿಂದ, ತಾವು ನನ್ನ ವಿಷಯವಾಗಿ ಯೋಚಿಸತಕ್ಕ ಕೆಲಸವಿಲ್ಲ.

'ಸ್ವಾಮಿನ್ ! ತಾವು ನನಗೋಸ್ಕರವಾಗಿ ದುಃಖಪಡಕೂಡದು. ನಾನು ಸುಖದಿಂದಿರುವೆನು. ತಾವು ವ್ಯಸನಪಡುವುದಾದರೆ, ನನಗೆ ಸಂತೋಷವೆಲ್ಲಿಯದು ? ತಮಗೆ ತಾಯಿ ತಂದೆ, ಅಕ್ಕ ತಂಗಿ, ಅಣ್ಣ ತಮ್ಮ ಬಂಧುಬಳಗ ಎಲ್ಲರೂ ಇರುವರು ಎಲ್ಲರಿಗೂ ನೀವು ಸಂತೋಷಸ್ವರೂಪರಾಗಿರುವಿರಿ. ನೀವು ಅವರಮೇಲೆ ದೃಷ್ಟಿಯಿಟ್ಟು ಮನಸ್ಸಿಗೆ ಶಾಂತಿಯನ್ನು ತೆಗೆದುಕೊಳ್ಳಬೇಕು. ಕೇವಲ ಪಾಮರಳಾದ ನನ್ನ ವಿಷಯದಲ್ಲಿ ಮಹಾತ್ಮರಾದ ತಾವು ವ್ಯಸನಪಡುವುದೆಂದರೇನು ?

'ಸ್ವಾಮಿನ್ ! ಮತ್ತೊಂದು ವಿಷಯವನ್ನು ತಮಗೆ ತಿಳಿಸಿ ಈ ಕಾಗದವನ್ನು ಪೂರ್ಣಮಾಡಬೇಕೆಂದಿರುವೆನು. ತಾವು ಏಕಾಂಗಿಯಾಗಿರದೆ ಬೇರೆ ವಿವಾಹವನ್ನು ಮಾಡಿಕೊಳ್ಳಬೇಕು. ರೂಪವತಿಯಾಗಿಯೂ, ಗುಣವತಿಯಾಗಿಯೂ, ವಿದ್ಯಾವತಿಯಾಗಿಯೂ ಇರುವ ಕನ್ಯೆಯನ್ನು ವಿವಾಹಮಾಡಿಕೊಂಡು ತಾವು ಸುಖವಾಗಿರಬೇಕೆಂಬುದೇ ನನಗೆ ಪರಮೋದ್ದೇಶವಾಗಿರುವುದು. ಈ ಮಾತಿಗೆ ತಾವು ಇಷ್ಟಪಡುವುದಿಲ್ಲವೆಂದು ನಾನು ಬಲ್ಲೆನು. ಆದರೆ ಒಂದು ಕಾರಣ

ಕ್ಕೋಸ್ಕರ ನಾವಿಬ್ಬರೂ ಏತಕ್ಕೆ ದುಃಖಪಡಬೇಕು ? ನೀವು ವಿವಾಹ ಮಾಡಿಕೊಂಡರೆ ನನ್ನ ಸುಖಕ್ಕೆ ಪಾರವೆಲ್ಲಿಯದು ? ತಾವು ಈಗ ವಿವಾಹಮಾಡಿಕೊಂಡಲ್ಲಿ, ಕಾಲಕ್ರಮದಲ್ಲಿ ತಮಗೆ ರೂಪಾನುರೂಪನಾದ ಪುತ್ರನು ಜನಿಸುವನು. ಅವನನ್ನು ನೀವು ಎಷ್ಟೋ ಆನಂದದಿಂದ ಮುದ್ದಾಡುವಿರಿ. ಆ ಮಗುವನ್ನು ನಾನೂ ಅಂಗೈಯಲ್ಲಿಟ್ಟು ಮಾತೃವಾತ್ಸಲ್ಯದಿಂದ ಲಾಲನಪಾಲನ ಮಾಡುವೆನು. ಅಲ್ಲದೆ ಅದನ್ನು ನನ್ನ ಮಗುವೆಂದೇ ಭಾವಿಸಿ ಪರಮಾನಂದವನ್ನು ಹೊಂದುವೆನು ಪ್ರಭೋ ! ಆ ಮಗುವಿನ ಬಾಯಿಂದ ನನ್ನನ್ನು “ ಅಮ್ಮ ” ಎಂದು ಕರಸೋಣಾಗಲಿ, ಅದರಿಂದಲೂ ನಾನು ಬಹಳವಾಗಿ ಸಂತೋಷಪಡುವೆನು. ತಾವು ಹಠದಿಂದ ಗೃಹಧರ್ಮವನ್ನು ಅವಲಂಬಿಸದಿದ್ದರೆ ಈ ಪರಿಪರಿಯಾದ ಆನಂದವೆಲ್ಲಿಯದು ? ಆದ್ದರಿಂದ ತಾವು ಖಂಡಿತವಾಗಿಯೂ ಮದುವೆಮಾಡಿಕೊಳ್ಳಬೇಕು. ತಾವು ಅನ್ಯತ್ರ ಪಾಣಿಗ್ರಹಣಮಾಡುವುದರಿಂದ, ನಾನು ತಮ್ಮಲ್ಲಿ ಪ್ರೀತಿಯಿಲ್ಲದವಳಾಗುವೆನೆಂದು ನೀವು ಭಾವಿಸಕೂಡದು. ಏತಕೆಂದರೆ—ನಮ್ಮ ಪ್ರೇಮಾತಿಶಯವು ಈ ಲೋಕದ ಸಾಮಗ್ರಿಯಾಗಿಲ್ಲ. ತಾವು ನನಗಾಗಿ ಕೆ[illegible]ರಬೇಕಾದ್ದಿಲ್ಲ.

‘ಸ್ವಾಮಿನ್ ! ಈ ಜಗತ್ತಿನಲ್ಲಿ ತಮ್ಮ ಹೊರತು ಮತ್ತಾರೂ ನನ್ನ ಹೃದಯದಮೇಲೆ ಅಧಿಕಾರಮಾಡಲಾರರು. ನಾನು ಮತ್ತೊಬ್ಬ ಪುರುಷನ ಚತುರವಾದ ಚತುರುಪಾಯಗಳಿಗೂ ಬೆರಗಾ[illegible]ಕ್ಕವಳಲ್ಲ. ತಮ್ಮ ಚರಣದರ್ಶನ ಹೊರತಾಗಿ ಈ ಜನ್ಮದಲ್ಲಿ ಮತ[illegible]ಬ್ಬನ ದರ್ಶನವನ್ನು ನಾನು ಮಾಡುವುದಿಲ್ಲ. ನಾನು ಯಾವಾಗಲೂ [illegible]ಸ್ತುವೇ ವಿನಾ ಮತ್ತೊಬ್ಬರದಲ್ಲ. ಲೋಕವೆಲ್ಲವೂ ನಮಗೆ ವಿರೋಧವಾಗಿಯೇ ವರ್ತಿಸಲಿ, ಜನರ ಸಮಯಾಚಾರಗಳು ನಮ್ಮ ಪವಿತ್ರವಾದ ಆಶಾಲತೆಯನ್ನು ಬಹಿಷ್ಕಾರನೆಂಬ ಕುಠಾರದಿಂದ ಛೇದನ

ಮಾಡಲಿ, ಈ ಪಾಪಭೂಯಿಷ್ಠವಾದ ಜಗತ್ತು ನಮ್ಮ ಸ್ವರ್ಗೀಯ ವಾದ ಸುಖಕ್ಕೆ ಕೈಲಾದಮಟ್ಟಿಗೂ ಪ್ರತಿಬಂಧಕವಾಗಿ ಪರಿಣಮಿಸಲಿ, ನಮ್ಮ ಪರಸ್ಪರ ಪ್ರೀತಿಯು ಎಂದೆಂದಿಗೂ ಅಭೇದ್ಯವು. ಆ ಪ್ರೀತಿಗೆ ನಾಶನೆಂಬುದೇ ಇಲ್ಲ. ನಮ್ಮ ಪ್ರೀತಿಯು ಈಗಲ್ಲದಿದ್ದರೆ ಯುಗಾಂತವಲ್ಲಿಯಾದರೂ ಜಯಿಸದೇ ಇರದು. ನಮ್ಮಿಬ್ಬರಿಗೂ ಪರಸ್ಪರ ಸಂಬಂಧವೇರ್ಪಡುವವರೆಗೂ, ನಾನು ತಮ್ಮ ಪ್ರೇಮಮಯವಾದ ದಿವ್ಯಮಂಗಳವಿಗ್ರಹವನ್ನು ನನ್ನ ಹೃದಯಸಿಂಹಾಸನದಮೇಲೆ ಪ್ರತಿಷ್ಠೆಮಾಡಿ ನನ್ನ ಪವಿತ್ರವಾದ ಭಾವದಿಂದ ಪೂಜಿಸುವೆನು. ಈ ಜನ್ಮದಲ್ಲಿ ಇದೇ ನನಗೆ ಪರಮಸಂತೋಷ, ಪರಮಮಂಗಳ.

ಲೋಕಸ್ಥಿತಿಯನ್ನರಿತ ತಮ್ಮಲ್ಲಿ ನಾನು ವಿಶೇಷವಾಗಿ ಬರೆಯಲು ಶಕ್ತಳಲ್ಲ. ವಿಶೇಷ ಬರೆಯುವುದರಿಂದ ದುಃಖವೇ ಹೆಚ್ಚುವುದು. ನಾನು ದುಃಖದ ಆವೇಗವನ್ನು ತಡೆದು ಮನಸ್ಸನ್ನು ಕಲ್ಲು ಮಾಡಿರುವೆನು. ತಾವೂ ಅದರಂತೆಯೇ ಇರಬೇಕೆಂಬುದೇ ನನ್ನ ಚರಮಪ್ರಾರ್ಥನೆ.

ಇತಿ ನಿರತಿಶಯಮಂಗಳಾಕಾಂಕ್ಷಿಣೀ

ಲೀಲಾವತೀ.

ವಿನಯನು ಕಾಗದವನ್ನು ಅತಿಪ್ರಯಾಸದಿಂದ ಓದಿ ಮುಗಿಸಿದನು. ಕಾಗದವು ಕೈಯ್ಯಲ್ಲಿದ್ದ ಹಾಗೆಯೇ ವಿನಯನು ಪ್ರಜ್ಞೆ ಇಲ್ಲದವನಾಗಿ ಇದ್ದಲ್ಲಿಯೇ ಬಿದ್ದುಬಿಟ್ಟನು.

---

## ಎರಡನೆಯ ಸಂಧಿ.

ವಿನಯ ಕುಮಾರನಿಗೆ ಲೀಲಾವತಿಯನ್ನು ಕೊಟ್ಟು ವಿವಾಹ ವಾಗಲಿಲ್ಲವೇತಕೆ? ಲೀಲಾವತಿಯು ಚಿರಕಾಲದಿಂದಲೂ ಬಳೆಸಿದ್ದ

ಪ್ರಣಯವೆಂಬ ವೃಕ್ಷದ ಬುಡಕ್ಕೆ ಕೊಡಲಿಯನ್ನು ಉಪಯೋಗಿಸಲು ಪ್ರವೃತ್ತಳಾದುದೇತಕೆ? ಈ ಪ್ರಣಯಿಗಳಾರು? ಇವರ ಪರಸ್ಪರ ಪ್ರಣಯದ ರಹಸ್ಯವೇನು? ಇವೇ ಮೊದಲಾದುವನ್ನು ನಮ್ಮ ಪಾಠಕಮಹಾಶಯರಿಗೆ ಈ ಸಂಧಿಯಲ್ಲಿ ತಿಳಿಸುವೆವು. ವಾಚಕರು ಸಾವಧಾನವಾಗಿ ಲಾಲಿಸಬೇಕು.

ಲೀಲಾವತಿಯ ತಂದೆಯಾದ ವಿಜಯಗೋಪಾಲನೆಂಬುವನು ಕೇವಲ ದರಿದ್ರನು. ಅನಂತಪುರದಲ್ಲಿ ಜೀವನವು ನಡೆಯುವುದು ಕಷ್ಟವೆಂದು ತಿಳಿದು, ಆತನು ಜಯನಗರಕ್ಕೆ ಹೋದನು. ಆಗ ಆತನಿಗೆ ಹದಿನಾರುವರ್ಷ ವಯಸ್ಸಾಗಿದ್ದಿತು. ವಿಜಯನು ಜಯನಗರದಲ್ಲಿ ಜೀವನಕ್ಕೆ ಮಾರ್ಗವನ್ನು ಕಲ್ಪಿಸಿಕೊಂಡು ಕೆಲವುಕಾಲ ಸುಖವಾಗಿದ್ದನು. ವಿಜಯನಿಗೆ ಇಪ್ಪತ್ತಾರನೆಯ ವಯಸ್ಸಿನಲ್ಲಿ ವಿವಾಹವಾಯಿತು. ವಿವಾಹವಾದ ನಾಲ್ಕೈದುವರ್ಷದೊಳಗಾಗಿಯೇ ಒಂದು ಹೆಣ್ಣುಮಗುವು ಜನಿಸಿತು. ಆ ಮಗುವಿನ ಹೆಸರು ಲೀಲಾವತಿ.

ವಿಜಯನು ತನ್ನ ಹೆಂಡತಿ ಮಕ್ಕಳನ್ನು ಅನಂತಪುರದಲ್ಲಿರುವ ತನ್ನ ಗೃಹದಲ್ಲಿಯೇ ಇಟ್ಟಿರಬೇಕೆಂದೆಣಿಸಿ, ತನ್ನ ಪರಮಮಿತ್ರನಾದ ಅನಂತರಾಮನಿಗೆ ತಿಳಿಸಿದನು. ಅನಂತನು ವಿಜಯನಂತೆ ದರಿದ್ರನಾಗಿರಲಿಲ್ಲ. ತಾನು ತಿಂದು ಇತರರನ್ನೂ ಕಾಪಾಡುವಷ್ಟು ಸಂಪತ್ತು ಆತನಲ್ಲಿದ್ದಿತು. ಆತನಿಗೆ ಮನೆತುಂಬ ಮಕ್ಕಳುಗಳಿದ್ದುವು. ಅವರಲ್ಲಿ ನಮ್ಮ ಕಥಾನಾಯಕನಾದ ವಿನಯಕುಮಾರನು ಮಧ್ಯದವನು. ಅವನಿಗೆ ಒಬ್ಬ ತಂಗಿಯೂ ಒಬ್ಬ ತಮ್ಮನೂ ಇದ್ದರು. ತಂಗಿಯ ಹೆಸರು ಇಂದಿರಾ.

ಅನಂತರಾಮನು ವಿಜಯನ ಹೆಂಡತಿಮಕ್ಕಳ ಯೋಗಕ್ಷೇಮವನ್ನು ವಹಿಸುವುದಾಗಿ ಒಪ್ಪಿಕೊಂಡಾಗ ಲೀಲಾವತಿಯು ಒಂದು ವರ್ಷದ ಮಗುವಾಗಿದ್ದಳು. ಆಗ ವಿನಯನಿಗೆ ಆರುತುಂಬಿ ಏಳನೆಯ

ವರ್ಷನಡೆಯುತ್ತಿತ್ತು. ವಿನಯನು ಯಾವಾಗಲೂ ಲೀಲಾವತಿಯ ಮನೆಯಲ್ಲಿಯೇ ಇರುತ್ತಿದ್ದನು. ಮಗುವಾಗಿದ್ದ ಲೀಲಾವತಿಯನ್ನು ಒಂದು ಕ್ಷಣಮಾತ್ರವೂ ಬಿಟ್ಟಿರುವುದಕ್ಕೆ ವಿನಯನ ಮನಸ್ಸು ಒಡಂಬಡುತ್ತಿರಲಿಲ್ಲ. ಇದಕ್ಕೆ ಕಾರಣವೇನೋ ಅದನ್ನು ನಾವು ಕಾಣೆವು.

ವಿನಯನಿಗೆ ಹತ್ತು ವರ್ಷವಾದಕೂಡಲೆ, ಅನಂತರಾಮನು ತನ್ನ ಮಗನನ್ನು ವಿದ್ಯಾಭ್ಯಾಸಕ್ಕಾಗಿ ಜಯನಗರಕ್ಕೆ ಕಳುಹಿಸಿದನು. ಅಂದಿನಿಂದ ವಿನಯನಿಗೆ ಮೂರುವರ್ಷ ಚಿಕ್ಕವಳಾಗಿದ್ದ ಇಂದಿರೆಯು ಲೀಲಾವತಿಯೊಡನೆ ಯಾವಾಗಲೂ ಸೇರಿಕೊಂಡು ಆಟವಾಡುತ್ತಿದ್ದಳು. ವಿನಯನು ಆಗಿಂದಾಗ ಅನಂತಪುರಕ್ಕೆ ಬಂದು ಲೀಲಾವತಿಯೊಡನೆ ಸರಸಸಲ್ಲಾಪಗಳನ್ನಾಡುವನು, ತಾನು ಕಂಡು ಕೇಳಿದ ವಿಷಯಗಳನ್ನು ಆದರದಿಂದ ಲೀಲಾವತಿಗೆ ತಿಳಿಸುವನು. ಲೀಲಾವತಿಯು ಅವೆಲ್ಲವನ್ನೂ ಪ್ರೀತಿಯಿಂದ ಕಿವಿಯಾರೆ ಕೇಳುವಳು. ಈರೀತಿಯಲ್ಲಿಯೇ ಕೆಲವುಕಾಲವು ಕಳೆಯಿತು.

ಅದೇ ಅನಂತಪುರದಲ್ಲಿಯೇ ಹಣಗಾರನೆನಿಸಿದ ಒಬ್ಬದೊಡ್ಡ ಮನುಷ್ಯನಿದ್ದನು. ಆತನ ಹೆಸರು ವೀರನಾರಾಯಣ. ಆ ಗ್ರಾಮದಲ್ಲಿ ವೀರನಾರಾಯಣನೇ ಮುಖಂಡನು. ಆತನ ಹೆಂಡತಿಯ ತಮ್ಮನೊಬ್ಬನು ಆತನ ಮನೆಯಲ್ಲಿಯೇ ವಾಸವಾಗಿರುತ್ತಿದ್ದನು. ಜನರು ಆತನನ್ನು ಕೆಲವುವೇಳೆ ದಂಷ್ಟ್ರ ಕರಾಳರಾಯನೆಂದೂ, ಕೆಲವುವೇಳೆ ಕರಾಳದಂಷ್ಟ್ರನೆಂದೂ ಕರೆಯುತ್ತಿದ್ದರು. ನಾವು ಅವನನ್ನು ಕರಾಳರಾಯನೆಂದು ಕರೆಯುವೆವು. ಕುಲಗೋತ್ರದ ವಿಷಯ ಹಾಗಿರಲಿ; ಮಿಕ್ಕವಿಷಯಗಳಲ್ಲಿ ಕರಾಳನು ಅಮೂಲ್ಯವಾದ ಅದೊಂದು ರತ್ನ. ಆತನ ಆಕೃತಿಯು ಅತಿಚಮತ್ಕಾರವಾದುದು. ಆತನ ಶರೀರವನ್ನು ಒಣಗಿದ ಕಟ್ಟಿಗೆಗೆ ಹೋಲಿಸೋಣವೆಂದರೆ, ಕಟ್ಟಿಗೆಯಲ್ಲಿಯೂ ಒಂದು ವಿಧವಾದ ರೂಪವಿರುವುದು ಕಣ್ಣುಗಳು ಗುಣಿಬಿದ್ದ ಕಾಂತಿ

ಹೀನವಾಗಿದ್ದವು. ಈಗಿನಕಾಲದಲ್ಲಿ ಅನ್ನಶಾಲೆಗಳಲ್ಲಿ ಭೋಜನ ಮಾಡುವವರ ಉದರವು ಮಾತ್ರ ವೃದ್ಧಿಯಾಗಿ, ಕೈಕಾಲುಗಳು ಅನ್ನ ರಸವಿಲ್ಲದೆ ಹೇಗೆ ಕೃಶವಾಗಿ ಕಡ್ಡಿಗಳಂತೆ ಒಳಕುವವೋ, ಹಾಗೆಯೇ ಕರಾಳನ ಆಕಾರವೂ ಶೋಭಿಸುತ್ತಿದ್ದಿತು. ಕೈಬಾಚಿಯಂತೆ ವಿಶಾಲವಾದ ದಾತಗಳು ಕರಾಳನ ಅನ್ಯಾದೃಶವಾದ ರೂಪವನ್ನು ನೋಡುವುದಕ್ಕೋಸ್ಕರವೋ ಎಂಬಂತೆ ತುಟಿಗಳಮೇಲೆ ಬಂದು ಕುಳಿತುಬಿಟ್ಟದ್ದವು. ಈ ಸೊಬಗನ್ನು ನೋಡುವುದಕ್ಕೆ ಮಾನವನ ಎರಡು ಕಣ್ಣುಗಳು ಸಾಲವು. ಕರಾಳನು ತನ್ನ ಜನ್ಮದಲ್ಲಿ ಒಂದು ದಿನವೂ ಪಾಠಶಾಲೆಯೆಂಬುದನ್ನು ಅರಿತಪ್ರಾಣಿಯೇ ಅಲ್ಲ. ವೀರನಾರಾಯಣನು ಮನೆಯಲ್ಲಿಯೇ ಉಪಾಧ್ಯಾಯರನ್ನಿಟ್ಟು, ಕರಾಳನ ತಲೆಯಲ್ಲಿ ವರ್ಣಮಾಲೆಯ ಮೊದಲನೆಯ ಅಕ್ಷರವಾದರೂ ನಿಲ್ಲುವಂತೆ ಎಷ್ಟೋ ಯತ್ನಮಾಡಿನೋಡಿದನು. ಆದರೆ ಪ್ರಯೋಜನವೇನೂ ಆಗಲಿಲ್ಲ. ಹಣೆಯಲ್ಲಿ ಬರೆಯದಿರುವುದು ಯಾರಿಗೂ ಯಾವಾಗಲೂ ಫಲಿಸಿಲ್ಲ. ನಾವು ಈ ಕಥೆಯನ್ನು ಬರೆಯುವಕಾಲದಲ್ಲಿ ಕರಾಳನಿಗೆ ಮೂವತ್ತು ವರ್ಷವಯಸ್ಸಾಗಿದ್ದಿತು. ಈತನು ಹೊತ್ತುಕಳೆಯುವುದು ಅತಿಪ್ರಯಾಸವೆಂದೆಣಿಸಿ, ಮನೆಯಮುಂದೆ ಕುಳಿತು ಸಿದ್ಧಪತ್ರವನ್ನು ಸೇವಿಸುತ್ತಾ ಚತುರ್ವಿಧಪುರುಷಾರ್ಥದ ಫಲಲಾಭಕ್ಕೋಸ್ಕರ ಮಾರ್ಗವನ್ನು ಹುಡುಕುತಿದ್ದನು. ಬಹು ಮಾತಿನಿಂದೇನು ? ವಿಶ್ವವಿಧಾತನು ಅತ್ಯಂತರೂಪವುಳ್ಳ ವಸ್ತುಗಳನ್ನು ಸೃಷ್ಟಿಮಾಡಿ, ಅತ್ಯಂತ ವಿಕಾರವುಳ್ಳ ವಸ್ತುವೊಂದನ್ನು ನಿರ್ಮಾಣಮಾಡಿ ನೋಡಬೇಕೆಂಬ ಕುತೂಹಲದಿಂದ ಕರಾಳರಾಯನನ್ನು ಸೃಷ್ಟಿಮಾಡಿರಬೇಕೆಂದು ಬೋಧೆಯಾಗುವುದು.

ಇಂತಹ ವಿಲಕ್ಷಣ ಲಕ್ಷಣವುಳ್ಳ ಕರಾಳನಿಗೆ ರೂಪದಲ್ಲಿ ಊರ್ವಶೀ ರತಿ ರಂಭಾದಿಗಳಿಗೆ ಸಮಾನಳಾದ ಲೀಲಾವತಿಯನ್ನು

ಕೊಟ್ಟು ವಿವಾಹಮಾಡಬೇಕೆಂದು ವೀರನಾರಾಯಣನು ಮನಸಾ ನಿಶ್ಚಯಿಸಿ ವಿಜಯಗೋಪಾಲನಿಗೆ ತಿಳಿಸಿದನು. ಯಾರುತಾನೇ ಈ ಸಂಬಂಧವನ್ನು ಅನುಮೋದಿಸ ಬಲ್ಲರು? ವಿಜಯನು ಕೊಂಚವೂ ಯೋಚಿಸದೆ ತನ್ನ ಅಸಮ್ಮತಿಯನ್ನು ತೋರ್ಪಡಿಸಿದನು. ಇದರಿಂದ ವೀರನಾರಾಯಣನಿಗೆ ವಿಪರೀತವಾಗಿ ಕೋಪ ಬಂದಿತು.

ವಿಜಯ ಗೋಪಾಲನು ಇನ್ನು ಕಾಲಹರಣ ಮಾಡುವುದರಿಂದ ಅನರ್ಥಪರಂಪರೆಗಳು ಉಂಟಾಗದಿರಲೆಂದು ತಿಳಿದು, ಲೀಲಾವತಿಯನ್ನು ತಡಮಾಡದೆ ವಿನಯಕುಮಾರನಿಗೆ ಕೊಟ್ಟು ವಿವಾಹಮಾಡಿ ಬಿಡಬೇಕೆಂದು ತನ್ನ ಮಿತ್ರನಾದ ಅನಂತರಾಮನಿಗೆ ತಿಳಿಸಿದನು. ಈ ಮಾತನ್ನು ಕೇಳಿದ ಅನಂತನಿಗೆ ಉಂಟಾದ ಸಂತೋಷವು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ವಿವಾಹವು ನಿಶ್ಚಯವಾಯಿತು. ಬೀಗರಿಬ್ಬರೂ ವಿವಾಹ ಸಾಮಗ್ರಿಗಳನ್ನು ಹವಣಿಸಿಕೊಳ್ಳುವುದರಲ್ಲಿ ನಿರತರಾದರು.

ಒಂದೆರಡು ದಿನಗಳಲ್ಲಿಯೇ ವಿನಯನಿಗೆ ಲೀಲೆಯನ್ನು ಕೊಟ್ಟು ವಿವಾಹವಾಗುವುದೆಂಬ ಸುದ್ದಿಯು ಎಲ್ಲೆಲ್ಲಿಯೂ ಹರಡಿ ವೀರನಾರಾಯಣನ ಕಿವಿಗೂ ಬಿದ್ದಿತು. ವೀರನಾರಾಯಣನು ಈ ಅತ್ಯಾಚಾರವನ್ನು ತಡೆಯಲಾರದವನಾಗಿ ವಿಜಯನನ್ನು ಕರೆಯಿಸಿಕೊಂಡು— ವಿಜಯ! ತಡಮಾಡದೆ ನಿನ್ನ ಮಗಳನ್ನು ನನ್ನ ಕರಾಳರಾಯನಿಗೆ ವಿವಾಹ ಮಾಡಿಕೊಡಬೇಕು, ಇದಕ್ಕೆ ನೀನು ವಿರೋಧವಾಗಿ ನಡೆಯುವುದಾದರೆ ನಿನ್ನ ಪರಿಣಾಮವೇ ಬೇರೆಯಾಗುವುದು, ಎಂದು ಹೇಳಿದ್ದನ್ನು ಕೇಳಿ ವಿಜಯನು ಕೋಪಗೊಂಡವನಾಗಿ— ಸ್ವಾಮಿ! ತಾವು ದೊಡ್ಡವರು, ತಮ್ಮ ಇಷ್ಟಕ್ಕೆ ವಿರೋಧವಾಗಿ ನಡೆದರೆ ತೊಂದರೆಯುಂಟೆಂದು ನಾನು ಬಲ್ಲವನಾದರೂ, ನನ್ನ ಮಗಳನ್ನು ಮಾತ್ರ ನಿಮ್ಮ ಕರಾಳನಿಗೆ ಕೊಡಲು ಖಂಡಿತವಾಗಿಯೂ ಒಪ್ಪುವುದಿ

ಲ್ಲ, ಎಂದು ಹೇಳಿಬಿಟ್ಟನು. ಇವನ್ನು ಕೇಳಿದಕೂಡಲೆ ವೀರನಾರಾಯಣನು ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತಾ — ಚಂಡಾಲ! ನನ್ನ ಮಾತು ಕೇಳುವುದಿಲ್ಲನೇ? ನಿನ್ನ ಮಗಳನ್ನು ಯಾವ ತೊತ್ತಿನ ಮಗನು ವರಿಸುವನು, ನೋಡುವೆನು, ಎಂದು ಗರ್ಜಿಸಿ ವಿಜಯನನ್ನು ತಳ್ಳಿಸಿಬಿಟ್ಟನು. ಅಂದು ಮೊದಲು ಅನಂತಪುರದಲ್ಲಿ ವೀರನಾರಾಯಣನ ಅಪ್ಪಣೆಯ ಮೇರೆ ವಿಜಯನು ಬಹಿಷ್ಕೃತನಾದನು. ಮದಾಂಧನಾದ ಮನುಷ್ಯನು ವಿವೇಕವಿಲ್ಲದೇ ಆಡುವ ಆಟಕ್ಕೆ ಇದಿರಿಲ್ಲನೇ? ಭೂಮಾತೆಯು ವಿವೇಕಿಗಳನ್ನು ತನ್ನ ವಕ್ಷದಲ್ಲಿ ಧಾರಣ ಮಾಡಿಲ್ಲನೇ? ತಪ್ಪು ಮಾಡಿದವರನ್ನು ಶಿಕ್ಷಿಸುವುದಕ್ಕಾಗಿ ನ್ಯಾಯಸ್ಥಾನಗಳು ಏರ್ಪಟ್ಟಿಲ್ಲನೇ? ದುಷ್ಟನ ಅತ್ಯಾಚಾರಕ್ಕಾಗಿ ಸಾಧುವಾದವನು ಕಷ್ಟನಷ್ಟಗಳನ್ನು ಅನುಭವಿಸಬೇಕೆಂಬುದು ಯಾವ ನ್ಯಾಯ? ಈಗಿನ ಕಾಲದಲ್ಲಿ ಇದೇ ನ್ಯಾಯ, ಧರ್ಮವು ಕಾಡುಪಾಲಾಗುವ ಕಾಲದಲ್ಲಿ ಹೀಗಾಗುವುದೇ ನ್ಯಾಯ.

ವಿಜಯನಿಗೆ ಬಹಿಷ್ಕಾರವು ನೆಲೆಯಾಗಿ ನಿಂತಿತು. ಲೀಲಾವತಿಗೆ ವಿವಾಹವಾಗುವುದು ನಿಂತು ಹೋಯಿತು. ಅನಂತರಾಮನು ಗ್ರಾಮದಲ್ಲಿ ಗಣ್ಯನಾಗಿದ್ದು ಅನೇಕರ ಪ್ರೀತಿಗೆ ಕಾರಣನಾಗಿದ್ದರೂ, ಆತನ ಪ್ರಯತ್ನವೆಲ್ಲವೂ ನಿಷ್ಫಲವಾಯಿತು. ವೀರನಾರಾಯಣನನ್ನು ಆಂತರ್ಯದಲ್ಲಿ ಎಲ್ಲರೂ ದ್ವೇಷಿಸುತ್ತಿದ್ದರೂ, ಬಹಿರಂಗದಲ್ಲಿ ಪ್ರೀತಿಸಬೇಕಾಗಿದ್ದಿತು. ಹಾ! ಮದಾಂಧತನ ಪ್ರತಾಪವನ್ನು ಧಿಕ್!

ಕೆಲವು ದಿನಗಳು ಕಳೆಯುವುದರೊಳಗಾಗಿಯೇ ವಿಜಯನು ಬಹಿಷ್ಕಾರದಿಂದುಂಟಾದ ಅವಮಾನವನ್ನು ಸಹಿಸಲಾರದೇ ಕೊರಗಿ ಕೊರಗಿ ಮಡಿದನು. ಮನೆಯಲ್ಲಿ ಆತನ ಹೆಂಡತಿ ಮಗಳು ಮಾತ್ರ ಉಳಿದರು. ವಿಜಯನು ಸತ್ತು ಹೋದನೆಂಬುದೊಂದು ಹೊರತಾಗಿ, ಮತ್ತಾವ ವಿಧವಾದ ಕೊರತೆಗೂ ಆಸ್ಪದವಿಲ್ಲದೇ ಮಾಡಿದ ಅನಂತ

ರಾಮನ ಮೈತ್ರಿಯು ಗ್ರಂಥದಲ್ಲಿ ಬರೆದಿಡಬೇಕಾದ ವಿಷಯವೇ ಸರಿ. ವಿಜಯನು ಪರಲೋಕವನ್ನೈದಿದ ತರುಣದಲ್ಲಿ, ವಿನಯನು ಜಯನಗರದಲ್ಲಿ ವಿದ್ಯಾಭ್ಯಾಸಂಗವನ್ನು ಸಾಂಗವಾಗಿ ನೆರವೇರಿಸಿ ತನ್ನ ತಂದೆಯ ಬಳಿಗೆ ಬಂದು ಸೇರಿದನು ಲೀಲೆಗೂ ವಿನಯನಿಗೂ ಮೊದಲಿನಿಂದಲೂ ಬೆಳೆದಿದ್ದ ಪ್ರೀತಿಯು ಏಕರೀತಿಯಾಗಿದ್ದುದರಿಂದ, ವಿನಯನು ಪದೇ ಪದೇ ಲೀಲಾವತಿಯ ಮನೆಗೆ ಹೋಗಿಬರಲಾರಂಭಿಸಿದನು. ಒಂದು ದಿನ ಆತನ ತಂದೆಯು ವೀರನಾರಾಯಣನ ಅತ್ಯಾಚಾರವನ್ನು ಕುರಿತು ವಿನಯನಿಗೆ ತಿಳಿಯಹೇಳಿದನು. ಅದಕ್ಕೆ ಪ್ರತ್ಯುತ್ತರವಾಗಿ ವಿನಯನು ಹೇಳಿದ್ದೇನೆಂದರೆ—" ಈ ಗ್ರಾಮದಲ್ಲಿ ವೀರನಾರಾಯಣನು ಮದಾಂಧನಾದ ಪ್ರತಾಪಶಾಲಿಯಾದ ದೊಡ್ಡಮನುಷ್ಯನಾಗಿರಬಹುದು. ಆದರೆ ರಾಜ್ಯವು ಅನಾಯಕವಲ್ಲ. ಇನ್ನು ನ್ಯಾಯಸ್ಥಾನವಿರುವುದು ; ಇನ್ನೂ ಪೋಲೀಸ್ ಇಲಾಖೆ ಇರುವುದು ; ಇನ್ನೂ ಧರ್ಮವನ್ನರಿತ ಮಹನೀಯರಿರುವರು. ಒಬ್ಬ ಮನುಷ್ಯನು ಬುದ್ಧಿಯಿಲ್ಲದೆ ಅತ್ಯಾಚಾರಮಾಡುವುದಾದರೆ ಎಲ್ಲರೂ ಅದನ್ನು ಸಹಿಸಬಲ್ಲರೆ ? ದುರ್ಮಾರ್ಗರಿಗೆ ಎಂದಾದರೊಂದು ದಿನ ಶಿಕ್ಷೆಯು ಇದ್ದೇ ಇರುವುದು, ಇದಕ್ಕಾಗಿ ಭಯಪಟ್ಟು ಕೊರಗಿದರೆ ನಾವು ಲೋಕದಲ್ಲಿ ಬದುಕಿದಂತೆಯೇ ಸರಿ

ಅನಂತರಾಮನು ಈ ಮಾತನ್ನು ಕೇಳಿ ಸುಮ್ಮನಾದನು. ಬಳಿಕ ವಿನಯನು ಲೀಲಾವತಿಯ ಬಳಿಗೆ ಬಂದು ವಿವಾಹದ ವಿಷಯವಾಗಿ ಮಾತನಾಡಿದನು. ಅದಕ್ಕೆ ಲೀಲಾವತಿಯು ಸಮಂಜಸವಾದ ಉತ್ತರವನ್ನು ಕೊಡಲಿಲ್ಲ. ಹೀಗೆಯೇ ಒಂದುವಾರವು ಕಳೆದಮೇಲೆ ಲೀಲಾವತಿಯು ವಿನಯನಿಗೆ ಒಂದು ಕಾಗದವನ್ನು ಬರೆದಳು. ಆ ಕಾಗದದ ಸಾರಾಂಶವನ್ನು ನಮ್ಮ ಪ್ರಿಯವಾಚಕ ಮಹಾಶಯರು ಮೊದಲನೆಯ ಸಂಧಿಯಲ್ಲಿ ಓದಿ ಜ್ಞಾಪಕದಲ್ಲಿಟ್ಟಿರಬಹುದು.

## ಮೂರನೆಯ ಸಂಧಿ.

ಈ ಸಂಸಾರದಲ್ಲಿ ಅವರಾರು? ಯಾರ ಹೃದಯದಲ್ಲಿ ಜೀವನ ಸಾರ ಸರ್ವಸ್ವವಾದ ಪ್ರಣಯವಿಲ್ಲವೋ, ಅವರು ಈ ಸಂಸಾರದಲ್ಲಿ ಯಾರಿರಬಹುದು? ಪ್ರಣಯ, ಮಮತೆ, ದಯೆ, ಆತ್ಮೀಯತೆ ಮುಂತಾದ ದೇವತಾಸಾಮಗ್ರಿಗಳು ಯಾರಹೃದಯದಲ್ಲಿ ಸ್ಥಾನವನ್ನು ಹೊಂದುವುದಿಲ್ಲವೋ, ಅಂತಹವರು ಈಸಂಸಾರದಲ್ಲಿಯಾರಿರಬಹುದು. ನೀವು ಕಂದಮೂಲಗಳನ್ನು ತಿಂದು ಜಟಾವಲ್ಕಲಧಾರಿಗಳಾಗಿ ಧರ್ಮ ಜ್ಞಾನವನ್ನು ಸಂಪಾದಿಸಿ ಮಹರ್ಷಿಗಳಾಗಿರಬಹುದು. ನಿಮ್ಮಿಂದ ಈ ಪ್ರಪಂಚಕ್ಕೆ ಪ್ರಯೋಜನವೇನು? ನೀವುಮಾತ್ರ ಸದ್ಗತಿಯನ್ನು ಹೊಂದಿದರೆ ಅದರಿಂದ ಪ್ರಪಂಚಕ್ಕೆ ಆದದ್ದೇನು? ಸಂಸಾರದ ಹಿತ ಕ್ಕಾಗಿ ಒಂದು ದಿನವನ್ನಾದರೂ ಯಾರು ಕಳೆಯುವುದಿಲ್ಲವೋ, ದುಃಖಿಗಳ ದುಃಖದಲ್ಲಿ ಯಾರ ಹೃದಯವು ಕರಗಿ ಒಂದು ದಿನವಾ ದರೂ ಅದರ ನಿವಾರಣೆಯಲ್ಲಿ ಯತ್ನಮಾಡುವುದಿಲ್ಲವೋ, ಅಂತಹವರ ಹೃದಯವು ಪಾಷಾಣ- ಪಾಷಾಣಕ್ಕಿಂತಲೂ ಕಠಿಣ. ವಸ್ತುತಃ ಈ ಪ್ರಪಂಚದಲ್ಲಿ ಪ್ರವೃತ್ತಿನಿಮಿತ್ತಗಳಾದ ಪ್ರಣಯಾದಿಮನೋಭಾವ ಗಳೇ ಮಾನವನ ಹೃದಯವೆಂಬ ಮರುಭೂಮಿಯಲ್ಲಿ ಫಲಪುಷ್ಪಭರಿತ ವಾದ ಕಲ್ಪವೃಕ್ಷಗಳು. ಇಂತಹವೃಕ್ಷಗಳನ್ನು ಛೇದನಮಾಡತಕ್ಕ ವನು ಪ್ರಕೃತಿಯ ನಿಯಮಕ್ಕೆ ವಿರೋಧಿಯೇ ಅಹುದು. ಪ್ರಕೃತಿ ವಿರೋಧಿಯು ಲೋಕನಿಂದೆಗೆ ಗುರಿಯಾಗದಿರನು. ಬುದ್ಧಿಯಿಲ್ಲದ ವರು ಇಂತಹ ಮನುಷ್ಯನಲ್ಲಿ ಜಿತೇಂದ್ರಿಯ, ಧಾರ್ಮಿಕ, ಆತ್ಮಜ್ಞಾನಿ ಎಂದು ಭಕ್ತಿಶ್ರದ್ಧೆಗಳನ್ನು ತೋರಿಸುವರು. ನಾವಾದರೋ ಚೋರ ನನ್ನಾಗಲಿ, ಹತ್ಯಾಕಾರಿಯನ್ನಾಗಲಿ, ನಂಬುವೆವೇ ವಿನಾ ಪ್ರಕೃತಿ ವಿರೋಧಿಯನ್ನು ಎಂದಿಗೂ ನಂಬಲಾರೆವು. ನಮ್ಮ ಕಥಾನಾಯಕ ನಾದ ವಿನಯಕುಮಾರನು ಜಿತೇಂದ್ರಿಯನಲ್ಲ, ಆತ್ಮಜ್ಞಾನಿಯಲ್ಲ,

ಧಾರ್ಮಿಕನು ಮೊದಲೇ ಅಲ್ಲ. ಆತನು ಕೇವಲ ಲೋಕತಂತ್ರಕ್ಕೆ ಅಧೀನನು ವಿನಯನು ಬಹಿಷ್ಕಾರದ ಭಯದಿಂದ ಲೀಲಾವತಿಯನ್ನು ಹೃದಯದಿಂದ ದೂರಮಾಡುವಷ್ಟು ಯೋಗಿಯಾಗಿರಲಿಲ್ಲ. ಆದುದರಿಂದ ಲೀಲಾವತಿಯು ಬರೆದ ಕಾಗದವು ಅವನ ಹೃದಯದಲ್ಲಿ ಬಹಳ ಕಾಲ ನೆಲೆಯಾಗಿ ನಿಲ್ಲಲಿಲ್ಲ. ಹೀಗಿರಲೊಂದುದಿನ ವಿನಯನು ಕರ್ತವ್ಯಾಕರ್ತವ್ಯಗಳನ್ನು ನಿಶ್ಚಯಮಾಡಿಕೊಳ್ಳುವುದಕ್ಕೋಸ್ಕರ ಲೀಲೆಯ ಮನೆಗೆ ಬಂದನು. ಯುವತೀಯುವಕರಿಬ್ಬರೂ ತಮ್ಮ ತಮ್ಮ ಭವಿಷ್ಯಜ್ಜೀವನದ ವಿಷಯದಲ್ಲಿ ಯಾವರೀತಿಯಿಂದ ವ್ಯವಸ್ಥೆಮಾಡಿಕೊಂಡರೆಂಬುದನ್ನು ನಾವಿಲ್ಲಿ ವಿವರಿಸುವೆವು.

ಲೀಲಾವತಿಯು ತನ್ನ ಕೋಣೆಯಲ್ಲಿ ಕುಳಿತಿರುವಳು. ವಿನಯನು ಆಕೆಯ ಬೆನ್ನಿನಮೇಲೆ ಕೈಯಿಟ್ಟು ಪಕ್ಕದಲ್ಲಿ ನಿಂತಿರುವನು. ಲೀಲೆಯು ತಲೆಯನ್ನು ಬಗ್ಗಿಸಿಕೊಂಡು ಕಣ್ಣೀರನ್ನು ಬಿಡುತ್ತಿದ್ದಳು. ವಿನಯನು ಕೊಂಚಹೊತ್ತು ಸುಮ್ಮನಿದ್ದು—ಲೀಲಾ ! ನಾವು ಸುಖವಾಗಿರಬೇಕೆಂದಲ್ಲವೇ ಬಯಸುವುದು? ನಮ್ಮ ಶುಭಾಶುಭಪರಿಣಾಮದಲ್ಲಿ ನಾವು ಅಂಧರೇ? ಎಂದನು.

ಲೀಲಾವತಿ—ನಾನು ಹಾಗೆ ಹೇಳುವುದಿಲ್ಲ. ತಮ್ಮ ಬುದ್ಧಿಯು ನನ್ನದಕ್ಕಿಂತಲೂ ಸಹಸ್ರಗುಣವಾಗಿ ಅಧಿಕವು. ಪ್ರೀತಿಯೆಂಬುದು ಮನುಷ್ಯನನ್ನು ಅಂಧನನ್ನಾಗಿ ಮಾಡಿಬಿಡುವುದೆಂದು ನಾನು ಬಲ್ಲೆನು.

ವಿನಯಕುಮಾರ—ನಾನು ಶುಭಾಶುಭಗಳನ್ನು ಪರಿಶೀಲಿಸಿ, ನಿನ್ನನ್ನು ಪ್ರೀತಿಸುತ್ತಿರುವೆನು. ನೀನುಮಾತ್ರ ನನ್ನನ್ನು ಅಂಧನನ್ನಾಗಿ ಮಾಡಿರುವೆ. ಇದರಲ್ಲಿ ನಿನ್ನ ಅಭಿಪ್ರಾಯವೇನು ? ನಮ್ಮಗಳ ಪವಿತ್ರವಾದ ಪ್ರೀತಿಯು ಇಂದಿಗೆ ನಾಶವಾಗಿ ಹೋಗುವುದು ನಿನಗಿಷ್ಟವೆ ?

ಲೀಲಾ—(ಉತ್ತರವಿಲ್ಲ.)

ವಿನಯ—ಇನೂ ನಿನ್ನ ಇಷ್ಟವಲ್ಲಿರುವುದಾದರೆ, ಹಾಗೆಯೇ ಆಗಲಿ. ನಿನಗೆ ವಿರೋಧವಾಗಿ ನಡೆಯಬೇಕೆಂಬುದು ನನಗೆ ಇಷ್ಟವಲ್ಲ. ಲೀಲೆ ! ಈಗ ಮುಂದಿನ ಯೋಚನೆ ಏನು ?

ಲೀಲಾ—ಬೇರೆ ಉಪಾಯವಿಲ್ಲ.

ವಿನಯ—ಉಪಾಯವಿಲ್ಲವೆ ? ನೀನು ಹೀಗೆ ಹೇಳುವುದು ನೋಡಿದರೆ ನನಗೆ ಆಶ್ಚರ್ಯವಾಗುವುದು. ನೀನಿನ್ನೂ ಲೋಕವನ್ನರಿಯದ ಬಾಲೆ. ವಿವಾಹದಿಂದ ನಮಗೆ ಯಾವ ವಿಪತ್ತೂ ಉಂಟಾಗುವುದಿಲ್ಲ.

ಲೀಲಾ—(ಖಿನ್ನಳಾಗಿ) ವಿನಯ ! ತಾವು ಈ ಮಾತನ್ನು ಹೇಳಬಾರದು. ನನ್ನನ್ನು ಮದುವೆಯಾಗುವುದರಿಂದ ತಮಗೆ ಮರಣಾಂತದವರೆಗೂ ವಿಪತ್ತುಗಳುಂಟೆಂದು ನಾನು ಕೇಳಿರುವೆನು.

ವಿನಯ—ವಿಪತ್ತಿಗೆ ಕಾರಣ ? ಧರ್ಮಜ್ಞಾನವಿಲ್ಲದವನ ಅತ್ಯಾಚಾರದ ಭಯದಿಂದ, ನಾನು ನನ್ನ ಸುಖಕ್ಕೆ ಜಲಾಂಜಲಿಯನ್ನು ಕೊಡಲೆ? ಯೋಚಿಸಿನೋಡು ಲೀಲಾ ! ನಾನು ಯಾವ ಕೆಟ್ಟಕೆಲಸವನ್ನೂ ಮಾಡಿಲ್ಲ. ನಾನಾರಿಗೂ ತೊಂದರೆಯನ್ನು ಕೊಟ್ಟಿಲ್ಲ. ಹೀಗಿರುವಲ್ಲಿ ನಾನು ಯಾರ ಭಯಕ್ಕಾಗಿ ಹೆದರಬೇಕು ?

ಲೀಲಾ—ಧರ್ಮಜ್ಞಾನಶೂನ್ಯನಾದ ದಯಾದರಿದ್ರನಾದ ಕಣಗಾರನ ಅತ್ಯಾಚಾರಕ್ಕೆ ಎಲ್ಲರೂ ಹೆದರಬೇಕು.

ವಿನಯ—ನಿಜ. ಆದರೆ ಅತ್ಯಾಚಾರಕ್ಕೆ ತಕ್ಕಶಿಕ್ಷೆಯು ಇಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ದೇಶದಲ್ಲಿ ರಾಜನಿರುವವರೆಗೂ ತಪ್ಪಿಗೆ ರಾಜದಂಡನೆಯಿರುವವರೆಗೂ, ನಾನು ನನ್ನ ಸುಖವನ್ನು ಏತಕ್ಕೆ ತ್ಯಾಗಮಾಡಲಿ ?

ಲೀಲಾ—(ಯೋಚಿಸಿ) ತಾವು ಹೇಳುವುದೆಲ್ಲವೂ ಅಸಾಧ್ಯ

ರಾಜದ್ವಾರದಲ್ಲಿ ಎಲ್ಲಾ ಕಾಲದಲ್ಲಿಯೂ ತಪ್ಪಿಗೆ ಸರಿಯಾದ ಶಿಕ್ಷೆಯು ದೊರೆಯುವುದೆಂದು ನಂಬುವುದಕ್ಕಾಗುವುದಿಲ್ಲ.

ವಿನಯ—ಹಾಗಾದರೆ ನಿನ್ನ ಅಭಿಪ್ರಾಯವಾದರೂ ಏನು? ಇಬ್ಬರನ್ನೂ ಇಬ್ಬರು ಮರೆತುಬಿಡಬೇಕೆಂದಲ್ಲವೇ ನಿನ್ನ ಕೋರಿಕೆ?

ಲೀಲಾ—ಆಗಬಾರದೇತಕೆ?

ವಿನಯ—ನೀನು ನನ್ನನ್ನು ಮರೆಯಬಲ್ಲೆಯ?

ಲೀಲಾ—(ಉತ್ತರವಿಲ್ಲ)

ವಿನಯ—ಲೀಲಾ! ನಿನ್ನ ಅಭಿಪ್ರಾಯವನ್ನು ಹೇಳಿಬಿಡು. ನನ್ನನ್ನು ಇಲ್ಲದ ಸಂಕಟಕ್ಕೆ ಗುರಿಮಾಡಬೇಡ.

ಲೀಲಾ—(ನಾಚಿಕೆಯಿಂದ) ಆಗಲಾರದು. ಈಗ ಉಪಾಯ ವೇನು?

ವಿನಯ—ನೂರಾರು ಉಪಾಯಗಳಿರುವುವು. ಯಾವ ಉಪಾಯವೂ ಸಾಗದಿದ್ದರೆ, ನಾವಿಬ್ಬರೂ ಒಟ್ಟಿಗೆ ಪ್ರಾಣತ್ಯಾಗಮಾಡಿಬಿಡೋಣ. ಇದಕ್ಕಾಗಿ ಏತಕೆ ಯೋಚಿಸಬೇಕು? ನೀನು ಇದಾವುದನ್ನೂ ಯೋಚಿಸದೆ, ನಿನ್ನಿಂದ ಮರೆಯುವುದು ಅಸಾಧ್ಯವಾಗಿದ್ದರೂ, ನನಗೆ ಮರೆತುಬಿಡೆಂದು ಮಾತ್ರ ನೀನು ಹೇಳಬಹುದೇ?

ಲೀಲಾ—ತಾವು ಪುರುಷರು.

ವಿನಯ—ಸತ್ಯ. ಹೆಂಗಸರಿಂದ ಸಹಿಸುವುದಕ್ಕೆ ಅಸಾಧ್ಯವಾದುದನ್ನು ಗಂಡಸರು ಸಹಿಸಬಲ್ಲವರಾಗಿರುವರು. ಆದರೆ ದೇಹದಿಂದ ಬೇರೆಯಿಲ್ಲದ, ಅಸ್ಥಿಮಾಂಸಗಳೊಡನೆ ಸೇರಿಹೋಗಿರುವ, ಪ್ರತಿಯೊಂದು ನಾಡಿಯಲ್ಲಿಯೂ ಹರಿಯುವ ರಕ್ತದೊಡನೆ ಪರಿಪ್ರವಹಿಸುತ್ತಿರುವ, ಅಮೂಲ್ಯವಾದ ಪ್ರಣಯವನ್ನು ಮಾತ್ರ ಬಿಡಲು ಪುರುಷನಾದವನಿಗೆ ಅಸಾಧ್ಯ. ಬಾದಮೇಲೆ ಇತರರು ತ್ಯಾಗಮಾಡಬಲ್ಲವರಾದರೂ ನನ್ನಿಂದ ಮಾತ್ರ ಆಗಲಾರದು. ನಾನು ಉರಿಯುವ ಬೆಂಕಿ

ಯಲ್ಲಾದರೂ ಸಂತೋಷದಿಂದ ಬೀಳಬಲ್ಲೆನು ; ಅತಿಪ್ರಿಯವಾದ ಪ್ರಾಣವನ್ನಾದರೂ ಬಿಡಬಲ್ಲೆನು ; ವಿಷವನ್ನು ಕಾರುವ ಕಾಲಸರ್ಪದ ಮುಖವನ್ನಾದರೂ ಚುಂಬಿಸಬಲ್ಲೆನು ; ಆದರೆ ನಿನ್ನನ್ನು ಮಾತ್ರ ಮರೆಯುವುದು ನನ್ನಿಂದಾಗಲಾರದು.

ಲೀಲಾವತಿಯು ಈ ಮಾತನ್ನು ಕೇಳಿ ಬಹಳಹೊತ್ತು ಸುಮ್ಮನಿದ್ದು—ಸ್ವಾಮಿ ! ನಾನು ಯಾವಾಗಲೂ ತಮ್ಮವಳೇ ಆಗಿರುವೆನು. ನಾನು ನಿಮ್ಮ ಕ್ಷೇಮಕ್ಕಾಗಿ ನನ್ನ ಅಭಿಪ್ರಾಯವನ್ನು ತಿಳಿಸಬೇಕಾಯಿತು. ನನ್ನ ಅದೃಷ್ಟಕ್ರಮದಲ್ಲಿ ಏನಿರುವುದೋ ಅದನ್ನು ಕಂಡವರ್ಯಾರು ? ನಾನಾದರೋ ಸರ್ವಾತ್ಮನಾ ತಮ್ಮ ಚರಣಸೇವೆಯಲ್ಲಿ ಸರ್ವದಾ ನಿರತಳಾದ ದಾಸಿಯಾಗಿರುವೆನು, ಎಂದು ಹೇಳಿದ್ದನ್ನು ಕೇಳಿ ವಿನಯನು ಪರಮಾನಂದಭರಿತನಾಗಿ ಲೀಲಾವತಿಯನ್ನು ಅಪ್ಪಿಕೊಂಡು, ಪ್ರಾಣೇಶ್ವರಿ ! ನನ್ನನ್ನು ಪರೀಕ್ಷಿಸುವುದಕ್ಕಾಗಿ ನೀನು ಈರೀತಿಯಲ್ಲಿ ವರ್ತಿಸಿದೆಯ ? ಎಂದು ಹೇಳಿ ಆಕೆಯ ಮುಖವನ್ನು ಒಂದೆರಡು ಸಲ ಚುಂಬಿಸಿ ತನ್ನ ಮನೆಗೆ ತೆರಳಿದನು.

ಮರುದಿನ ಲೀಲಾವತಿಯು ಎಂದಿನಂತೆ ತನ್ನ ಗೆಳತಿಯಮನೆಗೆ ಹೋಗಿದ್ದು, ಸಾಯಂಕಾಲವಾದೊಡನೆ ಮನೆಗೆ ಹಿಂತಿರುಗಿ ಬರುತ್ತಿದ್ದಳು. ಆಗ ಅವಳ ಜತೆಯಲ್ಲಿ ಯಾರೂ ಇರಲಿಲ್ಲ. ಗ್ರಾಮದಲ್ಲಿ ಎಲ್ಲರಮನೆಗಳಲ್ಲಿಯೂ ದೀಪವು ಹಚ್ಚುವುದಕ್ಕೆ ಪ್ರಾರಂಭವಾಗಿದ್ದಿತು. ಈ ಸಮಯದಲ್ಲಿ ಒಂದು ಸಾಮಾನ್ಯವಾದ ಮನೆಯಿಂದ—ಲೀಲಾ ! ನಮ್ಮ ಮನೆಗೆ ಒಂದುಸಲ ಬಂದು ಹೋಗಬಾರದೆ, ಎಂಬ ಶಬ್ದವು ಕೇಳಿತು. ಧ್ವನಿಯು ತನ್ನ ಬಾಲ್ಯಸ್ನೇಹಿತಳಾದ ಸುಭದ್ರೆಯದೆಂದು ತಿಳಿದು, ಲೀಲಾವತಿಯು ಆಕೆಯನ್ನು ನೋಡುವುದಕ್ಕೆ ಅವಳ ಮನೆಯೊಳಗೆ ಪ್ರವೇಶಮಾಡಿದಳು. ಬಹಳಕಾಲದಿಂದಲೂ ನೋಡದ ಸುಭದ್ರೆಯನ್ನು ಇಂದು ನೋಡುವೆನೆಂಬುದಾಗಿ ಆಕೆಗೆ

ಬಹಳ ಸಂತೋಷವಾಯಿತು. ಲೀಲೆಯು ಮನೆಯೊಳಗೆ ಪ್ರವೇಶ ಮಾಡಿ ನೋಡಿದಳು. ಮನೆಯಲ್ಲಿ ಯಾರೂ ಕಾಣಿಸದಿರಲು, ಲೀಲೆಯು ಭಯದಿಂದ—ಸುಭದ್ರೆ ! ನೀನೆಲ್ಲಿರುವೆ ? ಎಂದು ಪ್ರಶ್ನೆಮಾಡಿದಳು.

ಉತ್ತರ—ಹಿಂಭಾಗದಲ್ಲಿರುವ ಬಲಗಡೆಯ ಕೋಣೆಯಲ್ಲಿ.

ಲೀಲಾ—ಕತ್ತಲೆಯಲ್ಲಿ ನನಗೆ ಎಡಬಲ ತಿಳಿಯುವುದಿಲ್ಲ. ಇಷ್ಟುಹೊತ್ತಾದರೂ ಮನೆಯಲ್ಲಿ ದೀಪವಿಲ್ಲದಿರಲು ಕಾರಣವೇನು ?

ಉತ್ತರ—ನಾನು ಬಹಳ ಸಂಕಟಕ್ಕೆ ಒಳಗಾಗಿರುವೆನು. ಮನೆಯಲ್ಲಿ ಬಂದಿದ್ದರೆ ಮತ್ತೊಂದಿಲ್ಲ.

ಲೀಲಾ—ನೀನು ಈಗ ಎಲ್ಲಿರುವೆ ?

ಉತ್ತರ—ಇದೇ ಕೋಣೆಯಲ್ಲಿಯೇ.

ಲೀಲೆಯು ಸಮೀಪದಲ್ಲಿದ್ದ ಕೋಣೆಯೊಳಗೆ ಪ್ರವೇಶಮಾಡಿದಳು. ಅಲ್ಲಿಯಾರೂ ಇಲ್ಲದಿರಲು, ಲೀಲೆಯು ಹೆದರಿದವಳಾಗಿ—ಸುಭದ್ರೇ ! ಎಂದು ಗಟ್ಟಿಯಾಗಿ ಕೂಗಿದಳು. ಯಾರೂ ಉತ್ತರ ಕೊಡಲಿಲ್ಲ. ಇದ್ದಕ್ಕಿದ್ದ ಹಾಗೆಯೇ ಮನೆಯ ಬಾಗಿಲುಗಳೆಲ್ಲವೂ ಬಂಧಿಸಲ್ಪಟ್ಟವು. ಇವನ್ನು ನೋಡಿ ಲೀಲೆಯು ಚೀತ್ಕಾರಮಾಡ ತೊಡಗಿದಳು. ಫಲವಾಗಲಿಲ್ಲ. ಹಾಕಿದ್ದ ಬಾಗಿಲನ್ನು ತೆರೆಯಲು ಸಾಹಸಮಾಡಿದಳು. ಫಲವಾಗಲಿಲ್ಲ. ಬಾಗಿಲನ್ನು ತೆರೆಯಬೇಕೆಂದು ಕೂಗಿಕೊಂಡಳು. ಉತ್ತರವಿಲ್ಲ. ತನ್ನನ್ನು ಹೊರಗೆ ಬಿಟ್ಟುಬಿಡಬೇಕೆಂದು ಎಷ್ಟೋವಿಧವಾಗಿ ಅಂಗಲಾಚಿಕೊಂಡಳು. ಉತ್ತರವಿಲ್ಲ. ಇಷ್ಟೆನ್ನುವುದರೊಳಗಾಗಿ ಆಕೆಯ ಮೈಯೆಲ್ಲವೂ ಥರಥರನಡುಗಿತು. ಲೀಲೆಯು ನಿಂತಿರಲು ಅಸಮರ್ಥಳಾಗಿ ನೆಲದಮೇಲೆ ಬಿದ್ದುಬಿಟ್ಟಳು. ಆಕೆಯ ಕಣ್ಣುಗಳಿಂದ ಅಶ್ರುವು ಧಾರೆಯಾಗಿ ಹರಿದುಹೋಯಿತು. ಆಕೆಯು ತನ್ನ ಸಂಕಟವನ್ನು ಬಹಳಹೊತ್ತು ತಡೆಯಲಾರದವಳಾಗಿ ಗಟ್ಟಿಯಾಗಿ ಅತ್ತುಬಿಟ್ಟಳು.

ಲೀಲೆಯು ಅದೃಷ್ಟದಲ್ಲಿ ಏನಿರುವುದೆಂದು ಯಾರು ಬಲ್ಲರು ? ವಿಧಿಯು ಭವಿಷ್ಯತ್ಕಾಲದಲ್ಲಿ ತೋರಿಸುವ ವಿಲಾಸವು ಯಾರಿಗೆತಾನೇ ಗೋಚರವಾಗಿತ್ತು ? ಮುಂದಾಗುವುದು ಯಾರಿಗಾದರೂ ಗೊತ್ತಾಗುವಹಾಗಿದ್ದರೆ, ಆತನೇ ಎಲ್ಲ ಮನುಷ್ಯರಿಗಿಂತಲೂ ಶ್ರೇಷ್ಠನು.

---

## ನಾಲ್ಕನೆಯ ಸಂಧಿ.

ಸಂಧ್ಯಾಕಾಲ. ವೀರನಾರಾಯಣನ ಮನೆಯ ಒಂದು ಕೋಣೆಯಲ್ಲಿ ಒಬ್ಬ ಯುವಕನು ಒಂದು ಮಂಚದಮೇಲೆ ಕುಳಿತಿರುವನು. ಅವನು ವೀರನಾರಾಯಣನ ಏಕಮಾತ್ರ ಪುತ್ರನಾದ ಉನ್ಮತ್ತರಾಘವನು. ಮಂಚದಬಳಿಯಲ್ಲಿ ಒಬ್ಬ ನವಯೌವನಸಂಪನ್ನೆಯಾದ ಯುವತಿಯು ತಲೆಯನ್ನು ಬಗ್ಗಿಸಿಕೊಂಡು ನಿಂತಿರುವಳು. ಆಕೆಯು ಉನ್ಮತ್ತರಾಘವನ ಪತ್ನಿ—ಸರಳಕುಮಾರಿ.

ಲಕ್ಷ್ಮೀಸರಸ್ವತಿಯರಿಗೆ ನಿತ್ಯವಾದ ದ್ವಂದ್ವಯುದ್ಧವು ಲೋಕಪ್ರಸಿದ್ಧವಾಗಿರುವುದು. ಇವರಿಬ್ಬರಲ್ಲಿ ಲಕ್ಷ್ಮಿಯು ಮಂದಬುದ್ಧಿಯುಳ್ಳವಳು ; ಸರಸ್ವತಿಯು ತೀಕ್ಷ್ಣಬುದ್ಧಿಯುಳ್ಳವಳು. ಮಾನಾಪಮಾನಗಳು ಸರಸ್ವತಿಗೆ ತಿಳಿದಷ್ಟು ಲಕ್ಷ್ಮಿಗೆ ತಿಳಿಯದು. ಆದುದರಿಂದಲೇ ಲಕ್ಷ್ಮಿಯಿದ್ದಲ್ಲಿ ಸರಸ್ವತಿಯಿರಳು ; ಸರಸ್ವತಿಯಿದ್ದಲ್ಲಿ ಲಕ್ಷ್ಮಿಯು ಹೇಗೋ ನಾಚಿಕೆಯಿಲ್ಲದೆ ಬಂದು ಸೇರುವಳು. ಪ್ರಕೃತಕಾಲದಲ್ಲಿ ಲಕ್ಷ್ಮೀಸರಸ್ವತಿಯರಿಗೆ ಇರುವ ಪರಸ್ಪರಸಂಬಂಧವನ್ನು ಪರಿಶೀಲಿಸಿ ಮಹನೀಯರನೇಕರು ಇವರಿವರಲ್ಲಿರುವ ಆಜನ್ಮವೈರವನ್ನು ಹೋಗಲಾಡಿಸಬೇಕೆಂದು ಯತ್ನಮಾಡುತ್ತಿರುವರು. ಪರಮಾತ್ಮನು ಅವರಿಗೆ ದೀರ್ಘಾಯುರಾರೋಗ್ಯವನ್ನು ಕೊಟ್ಟು ಕಾಪಾಡಲಿ.

ಉನ್ಮತ್ತರಾಘವನಿಗೆ ಸಂಪತ್ತುಂಟು ; ಆದರೆ ಅವನು ಘೋರತರವಾದ ಮೂರ್ಖನಾಗಿದ್ದನು. ಮೂರ್ಖರು ಯಾರು ? ಎಂತಹ

ಏಕೆ ಮೂರ್ಖರೆನಿಸುವರು ? ಮೂರ್ಖತನಕ್ಕೆ ವಿದ್ಯೆಯಿಲ್ಲದಿರುವುದೇ ಕಾರಣವೇ ಅಥವಾ ವಿದ್ಯೆಯನ್ನು ಕಲಿತವನು ಮೂರ್ಖನಾಗದಿರಲು ಸಂಭವವುಂಟೆ ? ಲೋಕದಲ್ಲಿ ಮೂರ್ಖರಲ್ಲದ ದಡ್ಡರೂ, ಮೂರ್ಖರೆನಿಸಿದ ವಿದ್ಯಾವಂತರೂ ಅನೇಕರಿರುವುದನ್ನು ನಾವು ಕಂಡು ಕೇಳಿರುವೆವು. ಹಾಗಾದರೆ ಕೃತ್ರಿಮವಾದ ವಿದ್ಯೆಗೂ ಸಹಜವಾದ ಸ್ವಭಾವಕ್ಕೂ ಆವ ಸಂಬಂಧ ? ಜನರು ವಿದ್ಯಾವಂತರಿಗೆ ತೋರಿಸತಕ್ಕ ಮರ್ಯಾದೆಯು ವಿದ್ಯೆಯಿಲ್ಲದವರಿಗೆ ಸಲ್ಲುವುದಿಲ್ಲವಲ್ಲ! ಇದಕ್ಕೆ ಕಾರಣವೇನು ? ವಿದ್ಯೆಯು ಸ್ವಭಾವವನ್ನು ಬದಲಾಯಿಸಬಲ್ಲದೇ ? ಇಲ್ಲ. ವಿದ್ಯೆಯು ಮನುಷ್ಯನ ಸಹಜವಾದ ಭಾವಗಳಿಗೆ ಮೆರುಗನ್ನು ಕೊಡತಕ್ಕ ಒಂದು ಸಂಸ್ಕಾರವಿಶೇಷವಾಗಿರುವುದು ದುಷ್ಟನು ವಿದ್ಯಾವಂತನಾದರೆ ತನ್ನ ದುರ್ಗುಣಕ್ಕೆ ಬೇರೆ ವಿಧವಾದ ಸೊಬಗನ್ನುಂಟುಮಾಡುವನು ; ಶಿಷ್ಟನು ವಿದ್ಯೆಯನ್ನು ಕಲಿತರೆ, ಆತನ ಸದ್ಗುಣವು ಮತ್ತಷ್ಟು ಪ್ರಕಾಶಿತವಾಗುವುದು.

ನಮ್ಮ ಉನ್ಮತ್ತರಾಘವನು ಪೂರ್ವಕಾಲದ ರೀತ್ಯಾ ವಿದ್ಯಾವಂತನಲ್ಲದಿದ್ದರೂ, ನವೀನಕಾಲದರೀತ್ಯಾ ವಿದ್ಯಾವಂತನಾಗಿದ್ದನೆಂದು ಜನಗಳು ಆಡಿಕೊಳ್ಳುತಿದ್ದರು. ಉನ್ಮತ್ತನು ಜಯನಗರದಲ್ಲಿ ಒಂದು ವರ್ಷಕಾಲದ್ದು ಅನೇಕ ವಿದ್ಯೆಗಳನ್ನು ಕಲಿತುಕೊಂಡು ಬಂದಿದ್ದನು. ನವೀನಕಾಲದ ಯುವಕರಿಗೆ ಅವುಗಳನ್ನು ನಾವು ವಿವರಿಸಿ ಹೇಳಬೇಕಾಗಿಲ್ಲ.

ಇಂದು ಸರಳಕುಮಾರಿಗೆ ಪರಮ ಸೌಭಾಗ್ಯ. ಏತಕೆಂದರೆ— ಉನ್ಮತ್ತರಾಘವನು ತನ್ನ ಹೆಂಡತಿಯ ಕೋಣೆಯೊಳಗೆ ಹೋಗಿ ಮಂಚದ ಮೇಲೆ ಕುಳಿತಿರುವನು. ಸರಳಕುಮಾರಿಯು ಗಂಡನ ಪಕ್ಕದಲ್ಲಿ ನಿಂತಿರುವಳು.

ಸರಳಕುಮಾರಿಯು ಮಧುರಸ್ವರದಿಂದ ಗಂಡನನ್ನುಕುರಿತು—

ಪ್ರಾಣೇಶ್ವರ! ಇಾದು ಬಡದಾಸಿಯುಮೇಲೆ ಎಷ್ಟೋ ಅನುಗ್ರಹ. ಎಂದಳು.

ಉನ್ಮತ್ತ— ನಾನೆ ಒಂದು ಕೆಲಸಕ್ಕಾಗಿ ಇಲ್ಲಿಗೆ ಬಂದೆನು.

ಸರಳಕುಮಾರಿ— ನನ್ನಲ್ಲಿ ತಮಗೊಂದು ಕೆಲಸ ವಿರುವುದೂ ನನಗೆ ಪರಮ ಸೌಭಾಗ್ಯವೇ ಸರಿ.

ಉನ್ಮತ್ತ— ನನಗೆ ತುಂಬ ಕೆಲಸವಿರುವುದು. ನಾನು ಇಲ್ಲಿ ಬಹಳ ಹೊತ್ತು ಇರುವುದಕ್ಕಾಗುವುದಿಲ್ಲ.

ಸರಳ— ನನ್ನ ಹಣೆಯಲ್ಲಿ ಇಂತಹ ಅದೃಷ್ಟವು ಎಂದೂ ಬರೆದಿಲ್ಲ. ತಾವು ಒಂದು ಕ್ಷಣವಾದರೂ ಇಲ್ಲಿ ಕುಳಿತಿರೋಣಾಗಲಿ.

ಉನ್ಮತ್ತ—ನಾನು ನಿನ್ನೊಡನೆ ಸರಸಸಲ್ಲಾಪಕ್ಕೆ ಬಂದವನಲ್ಲ.

ಸರಳ—ಅದು ನನಗೆ ಗೊತ್ತು. ತಾವು ಮರೆತು ಇಲ್ಲಿಗೆ ಬಂದಿರಬೇಕು,

ಉನ್ಮತ್ತ—ನನ್ನನ್ನು ರೇಗಿಸಬೇಡ.

ಸರಳ—ನನ್ನನ್ನು ತಾವು ಅಳಿಸಕೂಡದು.

ಉನ್ಮತ್ತ—ನಿನ್ನ ಅಳುವು ನನಗೆ ಬೇಡ.

ಸರಳ—ನನ್ನ ಅಳುವನ್ನು ನೀವೇ ಕೇಳದಿದ್ದರೆ ಮತ್ತಾರು ಕೇಳಬಲ್ಲರು ?

ಉನ್ಮತ್ತ—ಹೊಟ್ಟೆಗಿಲ್ಲದೇ ಎಲ್ಲಿಯೋ ಬಿದ್ದಿದ್ದ ಮಾರಿಯನ್ನು ನಾನು ಮದುವೇ ಮಾಡಿಕೊಂಡು ಅನ್ನ ವಸ್ತ್ರಗಳನ್ನು ಕೊಟ್ಟು ಸುಖವಾಗಿಟ್ಟು ಕೊಂಡಿದ್ದಕ್ಕಲ್ಲವೇ ನೀನು ಅಳುವುದು. ನಿನ್ನನ್ನು ಮತ್ತೆ ಭಿಕ್ಷಾಕಾರಿಣಿಯನ್ನಾಗಿ ಮಾಡುವುದು ಎಷ್ಟರಲ್ಲಿರುವುದು ?

ಸರಳ ಕುಮಾರಿಯು ಗಂಡನ ಮರ್ಮಸ್ಪೃಕ್ಕಾದ ಮಾತುಗಳನ್ನು ಕೇಳಿ ಗಳಗಳ ಅಳಲಾರಂಭಿಸಿದಳು. ಇದನ್ನು ನೋಡಿ

ಉನ್ಮತ್ತನು ಉನ್ಮತ್ತನಾಗಿ ಹೆಂಡತಿಯನ್ನು ಕಾಲಿನಿಂದ ಒದ್ದು ಕೆಡಹಿದನು. ಸರಳೆಯು ಗಂಡನಿಗೆ ಪ್ರತಿಯಾಗಿ ಯಾವ ಮಾತನ್ನೂ ಆಡದೆ ಮತ್ತೆ ಎದ್ದು ನಿಂತಳು. ಉನ್ಮತ್ತನು ಆಕೆಯನ್ನು ಕುರಿತು— ಸುಟ್ಟ ಮೋರೆಯವಳೆ! ನಿನ್ನ ಒಡವೆಗಳೆಲ್ಲವನ್ನೂ ಈಗ ನನಗೆ ಕೊಟ್ಟುಬಿಡು, ಎಂದನು. ಅದಕ್ಕೆ ಸರಳೆಯು—ನಾನು ಒಡವೆಗಳನ್ನು ತೊಟ್ಟು ಯಾರನ್ನು ಮೋಹಿಸಬೇಕಾಗಿರುವುದು? ತಾವು ಎಲ್ಲವನ್ನೂ ತೆಗೆದುಕೊಳ್ಳಬಹುದು ಎಂದು ಹೇಳಿ, ತನ್ನ ಸರ್ವಾಭರಣವನ್ನೂ ಗಂಡನಕೈಗೆ ಕೊಟ್ಟುಬಿಟ್ಟಳು.

ಸರಳ ಕುಮಾರಿ! ಗಂಡನು ಕಾಲಿನಿಂದ ಒದ್ದು ಕೆಡಹಿದನೆಂದು ಕೋಪಗೊಂಡವಳಾಗಿ ಆತನನ್ನೇ ಹಿಂತಿರುಗಿ ಒದೆಯಲು ಎತ್ನಮಾಡದೇ ಇರುವುದಕ್ಕಾಗಿ ನೀನೇ ನಾರೀ ಪ್ರಪಂಚದಲ್ಲಿ ಪರಮಧನ್ಯಳು ಗಂಡನ ಕರ್ಣಕಠೋರವಾದ ಮಾತನ್ನು ಕೇಳಿಯೂ ಒದಲು ಯಾವ ಮಾತನ್ನು ಆಡದೇ ಇದ್ದುದಕ್ಕಾಗಿ ನೀನೇ ಆರ್ಯಕುಲಾಂಗನೆ. ನಿನ್ನಂತಹ ನಾರೀಮಣಿಗಳು ಈ ಕಲಿಯುಗದಲ್ಲಿ ಅತಿವಿರಳರು.

---

## ಐದನೇಯ ಸಂಧಿ.

ಮೂರು ದಿನಗಳಿಂದಲೂ ಲೀಲಾವತಿಯ ಸುಳಿವೇ ಇಲ್ಲ. ಅನಂತಪುರದಲ್ಲಿ ಲೀಲಾವತಿಯು ಅಕಸ್ಮಾತ್ತಾಗಿ ಮಾಯವಾದುದನ್ನು ಕುರಿತು ಎಲ್ಲಿರೂ ಮಾತನಾಡಿಕೊಳ್ಳುವರು. ಆದರೆ ಅವಳು ಎಲ್ಲಿಗೆ ಹೋದವಳೆಂಬುದು ಮಾತ್ರ ಯಾರಿಗೂ ತಿಳಿಯದು. ಮನೆಯಲ್ಲಾದರೋ ಅವಳ ತಾಯಿಯ ವ್ಯಸನಕ್ಕೆ ತುದಿಮೊದಲಿರಲಿಲ್ಲ. ಲೀಲಾವತಿಯನ್ನರಿತ ಗ್ರಾಮಸ್ಥರೆಲ್ಲರೂ ಆಕೆಗೆ ಬಂದ ದುರವಸ್ಥೆಯನ್ನು ನೋಡಿ ಪಶ್ಚಾತ್ತಾಪ ಪಡಲಾರಂಭಿಸಿದರು. ಈ ಅನರ್ಥಕ್ಕೆ

ವೀರನಾರಾಯಣನು ಮೂಲಕಾರಣನಾಗಿರಬಹುದೆಂದು ಊರಿನವರೆಲ್ಲರೂ ತಿಳಿದುಕೊಂಡಿದ್ದರೇವಿನಾ ಬಾಯಲ್ಲಿಮಾತ್ರ ಆಡುತ್ತಿರಲಿಲ್ಲ. ಅನಂತಪುರದ ಪ್ರತಿಯೊಬ್ಬನೂ ನೀಚನಾದ ವೀರನಾರಾಯಣನಿಗೆ ವಿಪತ್ತುಂಟಾಗಲೆಂದು ಹಾರೈಸುತಿದ್ದನು.

ಒಂದು ದಿನ ಬೆಳಗಿನಜಾವದಲ್ಲಿ ವಿನಯಕುಮಾರನು ಲೀಲಾವತಿ ಇರುವ ಸ್ಥಳವನ್ನು ಕಂಡು ಹಿಡಿಯುವುದಕ್ಕಾಗಿ ಬೀದಿಬೀದಿಗಳಲ್ಲಿ ತಿರುಗಾಡುತಿದ್ದನು. ಲೀಲಾವತಿಯು ಮಾಯವಾದಂದಿನಿಂದ ವಿನಯನಿಗೆ ಆಹಾರವಿಲ್ಲ, ನಿದ್ರೆಯಿಲ್ಲ, ಮನಸ್ಸಿಗೆ ಶಾಂತಿಯೆಂಬುದೇ ಇಲ್ಲ. ವಿನಯನು ಹುಚ್ಚು ಹಿಡಿದವನಂತೆ ಬೀದಿಗಳಲ್ಲಿ ಸಂಚಾರ ಮಾಡತೊಡಗಿದನು. ಆ ಸಮಯದಲ್ಲಿ ಕರಾಳನು ವಿನಯನಿದ್ದಲ್ಲಿಗೆ ಬಂದು ಹಠಾತ್ತಾಗಿ— ವಿನಯ ! ಇದೇನು ? ಇಷ್ಟು ಬೇಗನೆ ಎಲ್ಲಿಗೆ ಹೋಗುತ್ತಿರುವೆ ? ಎಂದನು.

ವಿನಯ— ಮಹಾಶಯ ! ತಾವು ಎಲ್ಲಿಗೆ ಹೊರಟಿರಿ ?

ಕರಾಳ—ಹೋಗುವುದೆಲ್ಲಿಗೆ ? ನಿನ್ನಲ್ಲಿಗೇ ಬಂದೆನು.

ವಿನಯ—ಏನಪ್ಪಣೆ ? ನನ್ನಿಂದೇನಾಗಬೇಕು ?

ಕರಾಳ—ವಿಶೇಷವೇನೂ ಇಲ್ಲ. ವೀರನಾರಾಯಣರಾಯರ ಕುಮಾರರು ನಿನ್ನನ್ನು ನೋಡಬೇಕೆಂದಿರುವರು. ಅವಕಾಶಮಾಡಿಕೊಂಡು ನೀನು ನನ್ನ ಜತೆಯಲ್ಲಿಯೇ ಬರಬೇಕು.

ವಿನಯ— ತಮ್ಮ ಜತೆಯಲ್ಲಿಯೇ ಬರುವುದಕ್ಕಾಗುವುದಿಲ್ಲ. ಕೊಂಚಹೊತ್ತಿನ ಮೇಲೆ ಬಂದುನೋಡುವೆನೆಂದು ಶ್ರೀಕುಮಾರರಿಗೆ ತಿಳಿಸಬೇಕು.

ಕರಾಳ— ನೀನು ಈಗಲೇ ಬಂದು ನೋಡಬಾರದೇತಕೆ ? ನಿನಗೇನು ಚಾಕರಿಯೋ ಚೂಕರಿಯೋ ? ದೊಡ್ಡವರು ಚಿಕ್ಕವರು ಎಂಬ ತಾರತಮ್ಯವೇ ಇಲ್ಲವಂತೆ ಕಾಣುವುದು.

ಈ ಮಾತನ್ನು ಕೇಳಿದ ಕೂಡಲೆ ವಿನಯನು ವೀರಾವೇಶದಿಂದ ಹುಬ್ಬುಗಂಟು ಹಾಕಿಕೊಂಡು—ಕರಾಳರಾಯರೆ! ಈ ಊರಿಗೆ ನೀವೊಬ್ಬ ದೊಡ್ಡಮನುಷ್ಯರು. ಮಿಕ್ಕವರೆಲ್ಲರೂ ನಿಮ್ಮ ಪರಿಚಾರಕರು, ನಾಚಿಕೆಯಿಲ್ಲದೆ ನನ್ನಿದಿರಿಗೆ ನಿಂತು ಮಾತನಾಡುವಿರಿ. ತಡಮಾಡದೆ ಇಲ್ಲಿಂದ ಹೊರಟುಹೋಗಿರಿ. ನನ್ನೊಡನೆ ವಿಶೇಷವಾಗಿ ಮಾತನಾಡುವುದರಿಂದ ನೀವು ಕಸಕ್ಕಿಂತಲೂ ಕಡೆಯಾಗಬೇಕಾದೀತು, ಎಂದು ಬಾಯಿಗೆ ಬಂದಹಾಗೆ ಮಾತನಾಡಿಬಿಟ್ಟನು.

ಕರಾಳನು ಒಂದು ಮಾತನ್ನು ಆಡದೆ ಬಂದದಾರಿಯನ್ನು ಹಿಡಿದು ಹೊರಟು ಹೋದನು. ವಿನಯನೂ ಬೆಳಗಾದಕೂಡಲೆ ಕರಾಳನ ಮುಖವನ್ನು ನೋಡಿದ್ದಕ್ಕಾಗಿ ಬಹಳಖಿನ್ನನಾಗಿ ಮನೆಯ ಕಡೆಗೆ ತಿರುಗುವುದರಲ್ಲಿದ್ದನು. ಆಗ ತನ್ನ ಪಕ್ಕದ ಮನೆಯ ಹುಡುಗಿ ಯೊಬ್ಬಳು ಅವನ ಹತ್ತಿರಕ್ಕೆ ಓಡಿಬಂದು ಬಂದು, ಕಾಗದವನ್ನು ಕೊಟ್ಟಳು. ವಿನಯನು ಕಾಗದವನ್ನು ಓದಿದನು.

ಪತ್ರ.

ಉನ್ಮತ್ತ ರಾಘವನ ಪರಾಮರ್ಶದಿಂದ ಲೀಲಾವತಿಯು ಬದ್ಧಳಾಗಿರುವಳು. ಅವಳಿರುವ ಸ್ಥಳವುಮಾತ್ರ ಗೊತ್ತಿಲ್ಲ. ತಮ್ಮ ಮರವಸ್ಥೆಯನ್ನು ನೋಡಿ, ನನಗೆ ತಿಳಿದಿದ್ದನ್ನು ನಿಮಗೆ ತಿಳಿಸಿರುವೆನು. ಚೆನ್ನಾಗಿ ಹುಡುಕಿನೋಡಿದರೆ ಲೀಲಾವತಿಯು ಸಿಕ್ಕುವಳು. ಧೈರ್ಯಗೆಡಬೇಕಾದ ಕಾರಣವಿಲ್ಲ.

ಈ ಅತ್ಯಾಚಾರಕ್ಕೆ ಮೂಲಕಾರಣನಾದವನಾರೆಂಬುವನ್ನು ನಿಮಗೆ ತಿಳಿಸಿರುವೆನು. ಆತನಿಗೆ ಮಾತ್ರ ನೀವು ವಿಪತ್ತನ್ನು ಬಯಸಕೂಡದೆಂದು ನನ್ನ ಪ್ರಾರ್ಥನೆ. ನಾನಾರೆಂಬುದು ನಿಮಗೆ ಅಪ್ರಕೃತವಾದುದು.

ನನಗೆ ತೊಂದರೆಯಾಗದಿರುವುದಕ್ಕಾಗಿ, ನೀವು ಈ ಕಾಗದವನ್ನು ಓದಿದ ಕೂಡಲೆ ಅಗ್ನಿಯಲ್ಲಿ ಹೋಮಮಾಡಿಬಿಡಬೇಕು. ಇತಿ—

ವಿನಯನು ಈರೀತಿಯಲ್ಲಿ ಬರೆದಿದ್ದ ಕಾಗದವನ್ನು ಓದಿದನು. ಕಾಗದದಲ್ಲಿ ಬರೆದವರ ಹೆಸರಿಲ್ಲ, ಬರೆದ ತಾರೀಖಿಲ್ಲ. ಇಷ್ಟುವರ್ತಮಾನವು ತಿಳಿದಕೂಡಲೆ,ವಿನಯನ ತಲೆಯಮೇಲೆ ಆಕಾಶವೇ ಕಳಚಿಬಿದ್ದಂತಾಯಿತು. ವಿನಯನು ಆವಾವುದನ್ನೋ ಯೋಚಿಸುತ್ತಾ ಮನೆಗೆಬಂದು ನಡೆದ ಸಂಗತಿಯೆಲ್ಲವನ್ನೂ ತನ್ನ ತಂದೆಯ ಮುಂದೆ ಹೇಳಿದನು. ತಂದೆಯಾದ ಅನಂತರಾಮನು ಇದನ್ನು ಕೇಳಿ ಏನೇನೋ ಆಲೋಚನೆಮಾಡಿದನು. ಆದರೆ ವೀರನಾರಾಯಣನ ಮುಂದೆ ಯಾವುದೂ ಸಾಗದು. ಅನಂತನು ಮಗನನ್ನು ಕುರಿತು—ಮಗು! ಲೀಲಾವತಿಯನ್ನು ಈ ಪುರಿಸಿಂದ ಬೇರೆ ಊರಿಗೆ ಸಾಗಿಸಿರಬೇಕೆಂದು ನನಗೆ ತೋರುವುದು. ವೀರನಾರಾಯಣನಿಗೆ ಸಂಬಂಧಪಟ್ಟ ಬಂದಾನೊಂದು ಗ್ರಾಮದಲ್ಲಿಯೇ ಲೀಲೆಯು ಬದ್ಧಳಾಗಿರಬೇಕೆಂಬ ಸಂಭವವಿರುವುದರಿಂದ, ನಾವು ಸಂಧಾನಮಾಡಿದರೆ ಆಕೆಯು ಸಿಕ್ಕಬಹುದು. ಆದರೆ ಮಾರ್ಗದಲ್ಲಿ ಅನೇಕ ತೊಂದರೆಗಳುಂಟೆದು ನಾನು ಬಲ್ಲೆನು, ಎಂದು ಹೇಳಿದ್ದನ್ನು ವಿನಯನು ಕೇಳಿ-ಪೇಪಿತಃ! ತಾವು ಯೋಚಿಸಬೇಕಾದ ಕೆಲಸವಿಲ್ಲ. ನಾನೀಗಲೆ ದೇವಪುರಕ್ಕೆ ಹೋಗಿ ಪೋಲೀಸಿಗೆ ವರ್ತಮಾನವನ್ನು ಕೊಡುವೆನು. ಅಲ್ಲಿನ ಪೋಲೀಸ್ ಅಧಿಕಾರಿಯು ಪತ್ತೇದಾರಿಕೆಲಸದಲ್ಲಿ ನಿಸ್ಸೀಮನಾಗಿರುವುದಲ್ಲದೆ, ದುಷ್ಟರನ್ನು ಶಿಕ್ಷಿಸುವುದರಲ್ಲಿ ಅದ್ವಿತೀಯನೆನಿಸಿರುವನು ವೀರನಾರಾಯಣನ ಅತ್ಯಾಚಾರದ ವಿಷಯ ನನಗಿರಲಿ, ಎಂದು ಉತ್ತರಕೊಟ್ಟನು. ಅನಂತರಾಮನು ದೇವಪುರಕ್ಕೆ ಹೋಗಲು ವಿನಯನಿಗೆ ಅನುಜ್ಞೆಯನ್ನು ಕೊಟ್ಟಕೂಡಲೆ ಯಾನವು ಸಿದ್ಧವಾಯಿತು. ಸಂಧ್ಯಾಕಾಲ

ಮೂರುಗಂಟೆಯ ಸಮಯದಲ್ಲಿ ವಿನಯನು ಯಾನದಲ್ಲಿ ಕುಳಿತುಕೊಂಡು ದೇವಪುರದ ಕಡೆ ತೆರಳಿದನು.

ಅನಂತಪುರಕ್ಕೂ ದೇವಪುರಕ್ಕೂ ಮಧ್ಯದಲ್ಲಿ ಒಂದು ದೊಡ್ಡ ಸರೋವರವಿರುವುದು. ವಾಹಕರು ಆ ಸರೋವರದ ಬಳಿಗೆಬಂದು, ಯಾನವನ್ನು ಒಂದು ಗಿಡದಕೆಳಗೆ ಇಳಿಸಿ ನೀರಿನಕಡೆಗೆ ತೆರಳಿದರು. ವಿನಯನು ಪಾಲ್ಕಿಯಿಂದ ಹೊರಗೆಬಂದು ಪ್ರಕೃತಿಯ ಭಯಂಕರವಾಗಿಯೂ ಮನೋಹರವಾಗಿಯೂ ಇರುವ ಸೌಂದರ್ಯವನ್ನು ನೋಡುತ್ತಾ ಪಾಲ್ಕಿಯನ್ನು ಒರಗಿಕೊಂಡು ನಿಂತನು. ಆ ಕೂಡಲೆ ಯಮಕಿಂಕರನಂತಿದ್ದ ಕೃಷ್ಣಕಾಯನಾದ ಒಬ್ಬ ಮನುಷ್ಯನು ಹಿಂದೆ ಬಂದುನಿಂತು ತನ್ನ ಕೈಯಲ್ಲಿದ್ದ ದಪ್ಪದೊಣ್ಣೆಯಿಂದ ವಿನಯನ ತಲೆಯಮೇಲೆ ಬಲವಾದ ಪೆಟ್ಟನ್ನು ಹಾಕಿದನು. ಗುರಿಯಿಟ್ಟು ಹೊಡೆದಪೆಟ್ಟು ತಗಲಿದ ಕೂಡಲೆ, ವಿನಯನು ಜ್ಞಾನತಪ್ಪಿ ನೆಲದಮೇಲೆ ಬಿದ್ದುಬಿಟ್ಟನು. ಮೃತ್ಯುವಿನ ಯಾವಯಾವ ಲಕ್ಷಣಗಳುಂಟೋ ಅವುಗಳೆಲ್ಲವೂ ಒಂದರ ಮೇಲೊಂದು ಕಾಣಿಸಲಾರಂಭಿಸಿದವು. ಹತ್ಯಾಕಾರಿಯು ಈ ಯವಸ್ಥೆಗಳನ್ನು ನೋಡಿ ವಿನಯನು ಸತ್ತುಹೋದನೆಂದು ತಿಳಿದು ಒಂದು ಕ್ಷಣವೂ ಅಲ್ಲಿನಿಲ್ಲದೆ ಪಲಾಯನ ಮಾಡಿದನು. ವಿನಯನು ಜ್ಞಾನವಿಲ್ಲದೆ ಭೂಮಿಯಮೇಲೆ ಬಿದ್ದಿರುವ ಸಂಗತಿಯು ವಾಹಕರು ಆದಿಯಾಗಿ ಯಾರಿಗೂ ಗೊತ್ತಾಗಲಿಲ್ಲ

ಕಾಲದೇವನ ಕುಟಿಲವಾದ ನಿಯಮವನ್ನು ಯಾರು ತಾನೇ ಭೇದಿಸಬಲ್ಲರು? ಮಾನವ! ನೀನು ಯಾತಕ್ಕಾಗಿ ಅಹಂಕಾರಪಡುವೆ? ನಿನ್ನ ಸಮಸ್ತವಾದ ಮಮತಾಹಂಕಾರಾದಿಗಳಿಗೆ ಮೂಲಸ್ಥಾನವಾದ ಪ್ರಾಣದಿಂದೊಡಗೂಡಿದ ದೇಹವು ಕೆಲಸಕ್ಕೆ ಬಾರದ ಸಂಪತ್ತೆಂದು ನಿನಗೆ ತಿಳಿಯದೇ ಹೋಯಿತೆ? ನೀನು ಆಶೆಯೆಂಬ ಚಕ್ರದಲ್ಲಿ ಸಿಕ್ಕಿ ಯಾವ ಕೆಲಸವನ್ನು ಮಾಡಲಾರೆ? ನೀನು ಮಾಡುವ

ಮೋಹನವನ್ನು ನೋಡಿದರೆ, ನಿನ್ನ ಜೀವನವು ವಿನಾಶವಾಗದೆ ಕಲ್ಪಾಂತದ ವರೆಗೂ ಇರುವುವೆಂದು ತೋರುವದಲ್ಲ! ಇದೆಂತಹ ಭ್ರಾಂತಿ! ಕ್ಷಣಿಕವಾದ ಈ ಪ್ರಪಂಚದಲ್ಲಿ ವಿವೇಕಿಗೂ ಅವಿವೇಕಿಗೂ ಶಾಶ್ವತ ಬುದ್ಧಿಯಿರವುದು ಆವುದರ ಮಹಿಮೆಯೋ ನಾವು ಕಾಣೆವು. ವಿಶ್ವವಿಧಾತನ ಬುದ್ಧಿ ಕೌಶಲದಿಂದ ನಿರ್ಮಿತವಾದ ಮೋಹಪಾಶವು ಮಾನವಕುಲದ ಸಾಂಸಾರಿಕವಾದ ಕಾರ್ಯಕಲಾಪಗಳನ್ನು ಹಿಡಿದು ಕಟ್ಟಿರುವುದು. ಈ ಪಾಶವು ಇಲ್ಲದಿದ್ದರೆ ಜೀವನದಲ್ಲಿ ಉತ್ಸಾಹ, ಆನಂದ, ಆಶಾ, ಸುಖ, ದುಃಖ, ಯಾವುವೂ ಇರುತ್ತಿರಲಿಲ್ಲ. ಹೇ ಮಾನವ! ಈ ಮೋಹಪಾಶವು ಇಲ್ಲದಿದ್ದರೆ, ನೀನು ಈ ಸಂಸಾರದಲ್ಲಿ ಬಿದ್ದು ಒದ್ದಾಡುತ್ತಿದ್ದೆಯಾ? ಈ ಕರ್ಮಕ್ಷೇತ್ರದಲ್ಲಿ ನೀನು ಜೀವನಕ್ಕಾಗಿ ಇಷ್ಟು ತಾಪತ್ರಯವನ್ನು ಅನುಭವಿಸುತ್ತಿದ್ದೆಯಾ? ದುಃಖರಾಶಿಗಳಿಂದ ತುಂಬಿದ ಈ ಪ್ರಪಂಚದಲ್ಲಿ ಒಂದು ಕ್ಷಣವಾದರೂ ನಿಲ್ಲಲು ಇಷ್ಟಪಡುತ್ತಿದ್ದೆಯಾ? ಮೋಹವಿಲ್ಲದಿದ್ದರೆ, ಪಿತ್ರಾರ್ಜಿತವಾದ ಸಂಪತ್ತಿನಲ್ಲಿ ಅಣ್ಣತಮ್ಮಂದಿರಿಗೆ ಜಗಳವೆಲ್ಲಿ? ಹಣದ ಆಶೆಗಾಗಿ ಬಡವನಿಗೂ ಭಾಗ್ಯವಂತನಿಗೂ ದ್ವೇಷಾಸೂಯೆಗಳೆಲ್ಲಿ? ಅನೇಕ ಕಾರಣಗಳಿಗಾಗಿ ಗಂಡ ಹೆಂತಿರಲ್ಲಿ ಅಪರಾಗವೆಲ್ಲಿ? ನರಹತ್ಯೆಯೆಲ್ಲಿ? ಕಳ್ಳತನವಾದರೂ ಎಲ್ಲಿ? ಮೋಹಪಾಶವೊಂದು ಸಂಸಾರವಲ್ಲಿನ ಕಾರ್ಯಕಲಾಪಗಳನ್ನು ಏಕತ್ರ ಪೋಣಿಸಿ ನಿಲ್ಲಿಸಿರುವ ಸೂತ್ರವು. ಈ ಸೂತ್ರವು ಯಾರಿಂದಲೂ ಛೇದಿಸುವುದಕ್ಕೆ ಅಸಾಧ್ಯವು.

ವಿನಯನು ಹೆಣದಂತೆ ಭೂಮಿಯ ಮೇಲೆ ಬಿದ್ದಿರುವನು. ಲೀಲಾವತಿಯೆಲ್ಲಿ? ಯಾರಿಗೋಸ್ಕರ ವಿನಯನು ಈ ವಿಪತ್ತನ್ನು ಹೊಂದಿದನೊ, ಅಂತಹ ಲೀಲಾವತಿಯೆಲ್ಲಿ? ಸ್ನೇಹಮಯನಾದ ತಂದೆಯೆಲ್ಲಿ? ಪರಮಶತ್ರುವಾದ ಉನ್ಮತ್ತರಾಘವನೆಲ್ಲಿ? ಈ ಯುವಸ್ತ್ರೀ

ಯು ಆಶ್ಚರ್ಯವಾದುದು. ಈಯವಸ್ಥೆಯಲ್ಲಿ ಶತ್ರು ಮಿತ್ರರಿಲ್ಲ, ದ್ವೇಷಹಿಂಸಾದಿಗಳಿಲ್ಲ, ವಂಚನೆಯಿಲ್ಲ, ಪ್ರಣಯವಿಲ್ಲ, ಮಮತಾಹಂಕಾರಗಳಿಲ್ಲ, ಸಂಸಾರದಲ್ಲಿ ಪ್ರವೃತ್ತಿನಿವೃತ್ತಿಗಳಿಲ್ಲ. ವಿನಯನು ಅಚೇತನನಾಗಿ ಬಿದ್ದಿರುವನು. ಈತನ ವಿಪತ್ತನ್ನು ಯಾರೂ ನೋಡಲಿಲ್ಲ, ಯಾರೂ ಕೇಳಲಿಲ್ಲ. ಆತ್ಮೀಯರು ಬಂದು ನೋಡಿ ಕಣ್ಣೀರನ್ನು ಸುರಿಸಿ ಹಾಯ್ ಎಂದು ಉಚ್ಚರಿಸಿದವರೇ ಇಲ್ಲ.

ವಿನಯನು ಭೂಗತನಾದ ಎಷ್ಟೋ ಹೊತ್ತಿನಮೇಲೆ ವಾಹಕರು ಬೆಬ್ಬೆಬ್ಬರಾಗಿ ಪಾಲಕಿಯ ಹತ್ತಿರ ಬಂದು ಈ ಭಯಂಕರವಾದ ನೋಟವನ್ನು ನೋಡಿ ಗಡಗಡ ನಡುಗಿದರು. ತಮಗೆ ಅಪಾಯವು ಎಲ್ಲಿ ಬರುವುದೋ ಎಂದು ಎಲ್ಲರೂ ವಿನಯನ ಮೃತಪ್ರಾಯವಾದ ದೇಹವನ್ನು ಅಲ್ಲಿಯೇ ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು.

ಪ್ರಾಣಭಯಕ್ಕಿಂತಲೂ ಮಿಂಚಿದ ಭಯವು ಮಾನವನಿಗೆ ಬೇರೊಂದಿಲ್ಲವೆಂದು ನಾವಿಲ್ಲಿ ತಿಳಿಸಬೇಕಾಗಿಲ್ಲ.

---

## ಆರನೆಯ ಸಂಧಿ.

ಸಾಯಂಕಾಲ ಸುಮಾರು ಐದು ಗಂಟೆಯ ಹೊತ್ತಿನಲ್ಲಿ ವೀರನಾರಾಯಣನು ತನ್ನ ಮನೆಯ ಜಗಲಿಯಮೇಲೆ ಕುಳಿತುಕೊಂಡಿದ್ದನು. ಗ್ರಂಥದಲ್ಲಿ ಉಲ್ಲೇಖಿತರಾಗುವ ಸಮಸ್ತರನ್ನೂ ವರ್ಣಿಸಬೇಕೆಂಬ ನಿಯಮವೇನೂ ಇರುವುದಿಲ್ಲ. ನಾವು ಕಂಡಕಂಡದ್ದನ್ನೆಲ್ಲಾ ವರ್ಣನೆಮಾಡಿ ವಾಚಕರನ್ನು ಬೇಸರಪಡಿಸಲಾರೆವು. ವೀರನಾರಾಯಣನು ಐವತ್ತುವರ್ಷದ ಕೃಷ್ಣವರ್ಣವುಳ್ಳ ಸ್ಥೂಲಕಾಯನಾಗಿದ್ದನೆಂದು ಹೇಳಿದರೆ ಸಾಕಾಗಿದೆ. ಆತನು ಜಗಲಿಯಮೇಲೆ ಕುಳಿತುಕೊಂಡಿರುವಾಗ, ಅನಂತರಾಮನು ಅಲ್ಲಿಗೆಬಂದು ಸೇರಿದನು. ವೀರನಾರಾಯಣನು ಅನಂತರಾಮನನ್ನು ತಕ್ಕ ಮರ್ಯಾದೆಯೊಡನೆ

ಬರಮಾಡಿಕೊಂಡು ತನ್ನ ಪಕ್ಕದಲ್ಲಿ ಆಸನದಮೇಲೆ ಕುಳ್ಳಿರಿಸಿದನು. ಬಳಿಕ ಅವರಿಬ್ಬರಿಗೂ ಸಂಭಾಷಣೆಯು ನಡೆಯಿತು.

ವೀರನಾರಾಯಣ—ಅನಂತಮಹಾಶಯ! ತಾವು ದೊಡ್ಡಮನಸ್ಸುಮಾಡಿ ಇಷ್ಟುದೂರ ಬಾರುವದಕ್ಕಾಗಿ ನಾನು ಪರಮಧನ್ಯನು.

ಅನಂತರಾವು—ನಾನು ತಮ್ಮ ದರ್ಶನಕ್ಕಾಗಿ ಬಂದೆನು. ತಮ್ಮ ಕುಮಾರರು ಆರೋಗ್ಯವಷ್ಟೆ ?

ವೀರ—ಏನು ಆರೋಗ್ಯವೋ ! ಆ ಮಗುವು ಜಯನಗರಕ್ಕೆ ಹೋಗಿಬಂದಾಗಿನಿಂದಲೂ ಅವನಿಗೆ ಆವುದಾದರೊಂದು ರೋಗವು ಇದ್ದೇ ಇರುವುದು. ಇದೆಲ್ಲವೂ ನವೀನಕಾಲದ ವಿದ್ಯಾಭ್ಯಾಸದ ಫಲವೆಂದು ತೋರುವುದು.

ಅನಂತ—ತಾವು ಹೇಳುವುದು ನಿಜ. ಈ ವಿದ್ಯಾಭ್ಯಾಸದಿಂದ ನಮ್ಮ ಆರ್ಯಧರ್ಮವೇ ಲುಪ್ತವಾಗಿ ಹೋಗುತ್ತಿರುವುದು. ಹೀಗಾಗಬೇಕಾದುದು ದೈವೇಚ್ಛೆ. ತಾವು ಕುಮಾರರನ್ನು ಜಾಗರೂಕತೆಯಿಂದ ಕಾಪಾಡಿಕೊಳ್ಳಬೇಕು.

ವೀರ—ನನ್ನ ಯತ್ನವೇನಿರುವುದು ? ಈಗಿನಕಾಲದ ಹುಡುಗರು ಹಿರಿಯರಮಾತನ್ನು ಅಷ್ಟಾಗಿ ಕೇಳುವುದಿಲ್ಲ. ನಾನೇನಾದರೂ ಪ್ರತಿಯಾಗಿ ಮಾತನಾಡಿದರೆ, ನಾವು ಕಂಡುಕೇಳದ ಭಾಷೆಯಲ್ಲಿ ಏನೇನೋ ಹೇಳಿಬಿಡುವರು. ಅದಕ್ಕಾಗಿ ನಾವು ಸುಮ್ಮನಿರಬೇಕಾಗಿದೆ.

ಅನಂತ—ಹುಡುಗರು ನಮ್ಮಮಾತು ಕೇಳಿದರೆ ಕೇಳಲಿ, ಇಲ್ಲವಾದರೆ ಬಿಡಲಿ. ಅವರ ರೋಗವನ್ನಾದರೂ ಹೋಗಲಾಡಿಸುವುದಕ್ಕೆ ಯತ್ನಮಾಡಬೇಕಾದುದು ನಮ್ಮ ಧರ್ಮ. ತಮಗೆ ದೇವರು ಏನನ್ನು ಕಡಮೆಮಾಡಿರುವನು ? ಎಲ್ಲವೂ ಹಣದಮೇಲೆ ಬರುವುದು.

ವೀರ—ನಾನು ಎಷ್ಟೋ ಹಣವನ್ನು ವೈದ್ಯರಿಗೆ ಕೊಟ್ಟಿರುವೆನು. ಆವುದರಿಂದಲೂ ಫಲವಾಗಲಿಲ್ಲ.

ಅನಂತ—ಹಾಗಾದರೆ ಆತನ ನಡತೆಯ ವಿಷಯದಲ್ಲಿ ಎಚ್ಚರವಾಗಿರಬೇಕೆಂದು ತೋರುವುದು.

ವೀರ—ಮಹಾಶಯ! ನನ್ನ ಮಗನ ವಿಷಯದಲ್ಲಿ ಸಂಶಯಪಡಲು ಕಾರಣವಿಲ್ಲ. ಅವನ ನಡೆನುಡಿಗಳು ಶ್ರೇಷ್ಠವಾದುವು. ಅವನಂತಹ ಹುಡುಗರು ಈ ಗ್ರಾಮದಲ್ಲಿ ಇಲ್ಲವೆಂದೇ ಹೇಳಬಹುದು.

ಅನಂತ—(ಸ್ವಗತ) ನಿನ್ನ ತಲೆ. ನಿನಗೆ ವಯಸ್ಸು ಬಂದದ್ದೂ ಕತ್ತೆಗೆ ವಯಸ್ಸು ಬಂದದ್ದೂ ಎರಡೂ ಒಂದೇ. (ಪ್ರಕಾಶ) ಈ ಗ್ರಾಮದಲ್ಲಿ ಜನಗಳು ಅವನ ವಿಷಯವಾಗಿ ಏನೇನೋ ಆಡಿಕೊಳ್ಳುವರು ಒಂದೆರಡು ಸಲ ನಾನೂ ಕೇಳಿರುವೆನು. ಏನಾದರೂ ಆಗಲಿ, ಎಚ್ಚರಿಕೆಯಿಂದಿರುವುದು ಒಳ್ಳೆಯದು.

ವೀರ—(ಕೋಪದಿಂದ) ನನ್ನ ಮಗನಮೇಲೆ ಇಲ್ಲದದೋಷವನ್ನು ಆರೋಪಿಸಲು ತಾವು ಬಂದಂತೆ ಕಾಣುವುದು. ಅವನು ಮಾಡಬಾರದ ತಪ್ಪೇನು? ಹೇಳಿರಿ ನೋಡೋಣ.

ಅನಂತ—ಲೀಲಾವತಿಯು ಮಾಯವಾದ ಸಂಗತಿ ತಮಗೂ ತಿಳಿದಿರಬಹುದು.

ವೀರ—ತಿಳಿಯದೇ ಏನು?

ಅನಂತ—ಅದಕ್ಕೆ ನಿಮ್ಮ ಮಗ, ಕರಾಳರಾಯ, ಇವರಿಬ್ಬರೂ ಕಾರಣರು.

ವೀರ—(ಹುಬ್ಬುಗಂಟಿಕ್ಕಿ) ಏನು ಹೇಳಿದಿರಿ? ಅನ್ಯಾಯದ ಮಾತನ್ನಾಡಬೇಡಿರಿ. ಇಂತಹ ಕೆಲಸವನ್ನು ಮಾಡುವುದಕ್ಕೆ ಆ ಮಗುವಿಗೆ ಧೈರ್ಯವೆಲ್ಲಿಯದು?

ಅನಂತ—ತಮ್ಮ ಧೈರ್ಯವೇ ಧೈರ್ಯ. ನಿಮ್ಮ ಪ್ರೋತ್ಸಾಹ ವನ್ನು ತೆಗೆದುಕೊಳ್ಳದೆ ಅವರಿಗೆ ಧೈರ್ಯವೆಲ್ಲಿಯದು ?

ವೀರ—ಹುಡುಗರು ಒಂದೊಂದು ವೇಳೆ ತಪ್ಪುಮಾಡುವು ದುಂಟು. ಅದಕ್ಕೆಲ್ಲಾ ದೊಡ್ಡವರೇ ಕಾರಣರೇ ? ಮಕ್ಕಳು ತಪ್ಪು ಮಾಡಿದರೆಂದು ಅವರನ್ನು ಕೊಂದು ಬಿಡುವುದಕ್ಕಾದೀತೆ ?

ಅನಂತ—ತಂದೆತಾಯಿಗಳಿಗೆ ಪುತ್ರರು ಯಾವಾಗಲೂ ಮಕ್ಕಳೇ ಅಹುದು. ತಾವು ಮಗುವೆಂದು ಎಲ್ಲವನ್ನೂ ಸಹಿಸುವಿರಿ. ಇತರರು ಆತನ ಹಾವಳಿಯನ್ನು ಹೇಗೆ ಸಹಿಸಬಲ್ಲರು ? ತಾವು ಮಗುವೆಂದು ಉದಾಸೀನಮಾಡದೆ ತಕ್ಕ ಬಂದೋಬಸ್ತು ಮಾಡಬೇಕು. ಇಲ್ಲ ದಿದ್ದರೆ ಇತರರು ಎಂದಾದರೊಂದು ದಿನ ಅದಕ್ಕೆ ತಕ್ಕ ಪ್ರತೀಕಾರ ಮಾಡದಿರರು.

ವೀರ—(ಸಿಡಿಮಿಡಿಗುಟ್ಟುತ್ತ) ಇತರರು ನನ್ನ ಮಗುವಿನಮೇಲೆ ಕೈಮಾಡುವಷ್ಟು ಧೀರರೆ ? ಅವರು ಮಾಡುವುದೆಲ್ಲಾ ಮಾಡಲಿ, ನಾನು ಈ ಗೊಡ್ಡುಬೆದರಿಕೆಗೆ ಹೆದರತಕ್ಕವನಲ್ಲ.

ಅನಂತ—(ಸ್ಥಿರನಾಗಿ) ತಾವು ಹೆದರತಕ್ಕವರಲ್ಲವೆಂದು ನಾನು ಬಲ್ಲೆನು. ರಾಯರೆ ! ಅಧರ್ಮವು ಎಷ್ಟುದಿನ ಅಡಗಿರಬಲ್ಲದು ? ಕಲಿಯುಗದಲ್ಲಿ ಪಾಪಕ್ಕೆ ತಕ್ಕ ಪ್ರತೀಕಾರವನ್ನು ಬಹುಕಾಲ ನಿರೀ ಕ್ಷಿಸಬೇಕಾಗಿಲ್ಲ. ತಾವು ನನ್ನ ಮೇಲೆ ಕೋಪಮಾಡದೆ, ನಿಮ್ಮ ಮಗನಿಗೆ ಬುದ್ಧಿ ಹೇಳಿರಿ. ಪ್ರಕೃತ ಲೀಲಾವತಿಯು ಎಲ್ಲಿ ನಿರ್ಬಂಧಿ ಸಲ್ಪಟ್ಟಿರುವಳು ? ದಯವಿಟ್ಟು ತಿಳಿಸೋಣವಾಗಲಿ.

ವೀರ—(ಎದ್ದುನಿಂತು) ತಾವು ಬಂದಿರುವುದು ನೋಡಿದರೆ ಏನೋ ಅನರ್ಥವಿರುವುದೆಂದು ತೋರುವುದು. ನನ್ನ ಗೌರವದಮೇಲೆ ನಿಮಗೆ ದೃಷ್ಟಿಯಿರುವಹಾಗೆ ಕಾಣಿಸಲಿಲ್ಲ.

ಅನಂತ—ನಿಮ್ಮ ಗೌರವಕ್ಕೆ ಕೊರತೆಯೇನಿರುವುದು? ದುಷ್ಟ

ರಿಗೆ ಶಿಕ್ಷೆಯಾಗಬೇಕಾದುದು ಅಧರ್ಮವಲ್ಲ. ಇದಕ್ಕಾಗಿ ತಾವು ನನ್ನ ಮೇಲೆ ಆಗ್ರಹಮಾಡಿದರೆ ಏನಾಗುವುದು?

ವೀರ—ಮಹಾಶಯ! ತಾವು ದಯಮಾಡೋಣಾಗಲಿ. ಮುಂದಿನ ಕೆಲಸವನ್ನು ನಾನು ನೋಡಿಕೊಳ್ಳುವೆನು. ನಮ್ಮ ಗ್ರಾಮದವರು ಕೆಟ್ಟಿರುವರು. ಈಗಲೇ ಅವರಿಗೆ ತಕ್ಕ ಶಾಸನಮಾಡದಿದ್ದರೆ ಮುಂದೆ ನಮಗೆ ಉಳಿಗಾಲವಿಲ್ಲ. ಅನಂತರಾಮ ಮಹಾಶಯ! ತಾವು ದಯಮಾಡೋಣಾಗಲಿ.

ವೀರನಾರಾಯಣನು ಹೀಗೆ ಹೇಳುತಹೇಳುತ ಮನೆಯೊಳಗೆ ಪ್ರವೇಶಮಾಡಿದನು ಅನಂತರಾಮನು ರಾಯರಿಗೆ ಕೋಪಬಂದಿತೆಂದು ತಿಳಿದು ತನ್ನ ಮನೆಗೆ ಹಿಂತಿರುಗಿದನು. ವೀರನಾರಾಯಣನು ತನ್ನ ಪ್ರಶ್ನೆಗೆ ಸರಿಯಾದ ಉತ್ತರಕೊಡಲಿಲ್ಲವೆಂದು ಮನನೊಂದವನಾಗಿ, ಅನಂತನು ಮನೆಗೆ ಬಂದುಬಿಟ್ಟನು ಆಗ ರಾತ್ರಿ ಸುಮಾರು ಒಂಬತ್ತುಗಂಟೆ ಹೊತ್ತಾಗಿದ್ದಿತು. ಅನಂತನು ಭೋಜನವನ್ನು ತೀರಿಸಿಕೊಂಡು ಮಂಚದಮೇಲೆ ಮಲಗಿದನು. ಎಷ್ಟುಹೊತ್ತಾದರೂ ಆತನ ಕಣ್ಣಿಗೆ ನಿದ್ರೆ ಹತ್ತಲಿಲ್ಲ. ಅನಂತನು ಹಾಸಿಗೆಯ ಮೇಲೆ ಮಲಗಿಕೊಂಡೇ ಏನೇನೋ ಯೋಚಿಸಿದನು. ಒಂದೊಂದು ವೇಳೆ, ವಿನಯನೆಲ್ಲಿ? ಲೀಲಾವತಿಯೆಲ್ಲಿ? ಅವರಿಬ್ಬರೂ ಈಗ ಎಲ್ಲಿರುವರು? ಎಂದು ಯೋಚಿಸುವನು. ಒಂದೊಂದುವೇಳೆ, ವೀರನಾರಾಯಣನು ನ್ಯಾಯವಿರುದ್ಧವಾಗಿಯೂ, ಯುಕ್ತಿವಿರುದ್ಧವಾಗಿಯೂ ಕೆಲಸಮಾಡಿ ಜನರಿಗೆ ತೊಂದರೆ ಕೊಡುತ್ತಾನಲ್ಲ, ಇದಕ್ಕೆ ಪ್ರತೀಕಾರವಿಲ್ಲವೆ? ಅವನ ಅಪಕಾರವನ್ನು ಮರೆಯುತ್ತಿದ್ದರೆ ದಿನಕಳೆಯುವುದು ಕಷ್ಟ; ಉದಾಸೀನರಾಗಿರೋಣವೆಂದರೆ, ಅವನ ಹಾವಳಿಯನ್ನು ತಡೆಯವುದು ಮಹಾಕಷ್ಟ. ಬಂದದ್ದೆಲ್ಲಾ ಬರಲಿ. ದುಷ್ಟನನ್ನು ನಿಗ್ರಹಮಾಡದೇ ಬಿಡುವುದು ಧರ್ಮವಲ್ಲ, ಎಂದು

ಯೋಚಿಸುವನು. ಯೋಚಿಸುತ್ತಿದ್ದ ಹಾಗೆಲ್ಲ ನಿದ್ರೆಯು ದೂರ ತೊಲಗಿತು.

ಮನೆಯ ಗಡಿಯಾರದಲ್ಲಿ ರಾತ್ರಿ ಹನ್ನೆರಡುಗಂಟೆ ಹೊಡೆಯಿತು. ಪ್ರಕೃತಿಯು ಶಾಂತಮೂರ್ತಿಯನ್ನು ತಾಳಿರುವುದು. ಮಾರುತನು ಸುಯ್ ಎಂದು ಬೀಸುತ್ತಿರುವನು. ಚಂದ್ರನು ಒಂದೊಂದುವೇಳೆ ಮೇಘಖಂಡಗಳಿಂದ ಮರೆಮಾಡಲ್ಪಡುತ್ತಲೂ, ಒಂದೊಂದುವೇಳೆ ಬಿಡಲ್ಪಡುತ್ತಲೂ ಗಗನಮಂಡಲದಲ್ಲಿ ಪ್ರಕಾಶಿಸುತ್ತಾ ಪಶ್ಚಿಮದಕಡೆ ತೆರಳುತ್ತಿದ್ದನು. ಗಿಡಗಳಮೇಲೆ ಕುಳಿತಿದ್ದ ಪಕ್ಷಿಗಳ ರಕ್ಕೆಗಳ ಶಬ್ದವು ಮಾತ್ರ ಆಗಿಂದಾಗ ಪ್ರಕೃತಿಯ ಪ್ರಶಾಂತತೆಗೆ ಭಂಗವನ್ನುಂಟುಮಾಡುತಿದ್ದಿತು. ಜನರೆಲ್ಲರೂ ದಿನದಲ್ಲುಂಟಾದ ಪರಿಶ್ರಮವನ್ನು ಹೋಗಲಾಡಿಸಿ ಕೊಳ್ಳುವುದಕ್ಕೋಸ್ಕರ ಹಾಸಿಗೆಯಲ್ಲಿ ಮಲಗಿಕೊಂಡು ವಿಶ್ರಾಂತಿಸುಖವನ್ನನುಭವಿಸುತಿದ್ದರು. ಅನಂತರಾಮನು ಮಾತ್ರ ನಿದ್ರಾಭಾವದಿಂದ ಹಾಸಿಗೆಯಲ್ಲಿ ಹೊರಳಾಡುತಿದ್ದನು.

ಹಠಾತ್ತಾಗಿ ಇದೆಂತಹ ವಿಪತ್ತು? ಅನಂತರಾಮನ ದನದ ಕೊಟ್ಟಿಗೆ, ಸೀರಿನ ಮನೆ, ಅಡಿಗೆಯ ಮನೆ, ಉಗ್ರಾಣ, ಮೊದಲಾದುವೆಲ್ಲ ಧಘಧಘ ಉರಿಯಲಾರಂಭಿಸಿದವು. ಮನೆಯಲ್ಲಿದ್ದ ಹೆಂಗಸರ ಮಕ್ಕಳ ಚೀತ್ಕಾರಧ್ವನಿಯು ಗಗನವನ್ನಡರಿತು. ದನಕರುಗಳು ಕಟ್ಟಿಹಾಕಿದ್ದ ಗೂಟಗಳನ್ನು ಕಿತ್ತುಕೊಂಡು ದಿಕ್ಕಾಪಾಲಾಗಿ ಓಡಿಹೋದುವು. ಸುತ್ತಮುತ್ತಲೂ ಇರುವ ಗಿಡಗಳಮೇಲಿದ್ದ ಪಕ್ಷಿಗಳು ಪ್ರಾಣಭಯದಿಂದ ಚಿಲಿಪಿಲಿ ಧ್ವನಿಮಾಡುತ್ತಾ ದೂರ ಹಾರಿಹೋದುವು. ನಾಯಿಗಳು ಬೊಗಳಿದವು. ಈ ಕೋಲಾಹಲವನ್ನು ನೋಡಿ ಅಕ್ಕಪಕ್ಕದವರೆಲ್ಲರೂ ಬಂದು ಬೆಂಕಿಯನ್ನು ಆರಿಸುವ ಯತ್ನಮಾಡತೊಡಗಿದರು. ಜನರ ಪ್ರಯತ್ನದಿಂದ ಬೆಂಕಿಯು ಆರುವ ಸಂಭವವಿರಲಿಲ್ಲ. ಎಲ್ಲರೂ ನಿರಾಶರಾಗಿ ದೂರ ಸರಿದುನಿಂತರು.

ಕೊಂಚಕಾಲವೆನ್ನುವುದರೊಳಗಾಗಿಯೇ ಅನಂತರಾಮನ ಮನೆಯು ಸುಟ್ಟು ಬೂದಿಯಾಗಿಹೋಯಿತು. ಬಂದಿದ್ದವರೆಲ್ಲರೂ ಅನಂತರಾಮನ ದುಃಖವನ್ನು ನೋಡಿಗೋಳಿಡುತ್ತಾ ತಮ್ಮತಮ್ಮ ಮನೆಗಳಿಗೆ ತೆರಳಿದರು.

ಅನಂತರಾಮ ಮಹಾಶಯ ! ಸಾಧುವಾದ ನಿನಗೆ ಇಂತಹ ದಾರುಣವಾದ ವಿಪತ್ತುಂಟಾಗಬಹುದೇ ? ಮೂರ್ಖನಾದ ವೀರನಾರಾಯಣನಿಗೆ ನೀನು ಉಪದೇಶಮಾಡುವುದಕ್ಕೆ ಹೋಗಬಹುದೇ ? ನೀನು ಮಾಡಿದ್ದು ತಪ್ಪೆಂದು ನಾವೆಂದಿಗೂ ಹೇಳುವುದಿಲ್ಲ. ನೀನು ಧರ್ಮಪರಾಯಣನಾಗಿರುವೆ. ನಿನಗೆ ಪದೇ ಪದೇ ಅನರ್ಥಪರಂಪರೆಗಳುಂಟಾದರೂ ಅನಂತಕಾಲದಲ್ಲಿ ಶಾಶ್ವತವಾದ ಸುಖವುಂಟು. ನಿನ್ನ ಮನೆಯು ಈಗ ಸುಟ್ಟು ಬೂದಿಯಾದರೂ, ನಾಳೆ ನಿನಗೆ ಮತ್ತೊಂದು ಮನೆಯು ಸಿಕ್ಕುವುದು. ಆದರೆ ಮಹಾವ್ಯಸನದಿಂದ ನಿನ್ನ ಕಣ್ಣುಗಳಿಂದ ಜಾರಿಬೀಳುವ ಅಶ್ರುಬಿಂದುಗಳು ಲೋಕಶತ್ರುವಾದ ವೀರನಾರಾಯಣನನ್ನೂ ಅವನ ಪರಿವಾರವನ್ನೂ ಅಗಾಧವಾದ ನರಕಕೂಪದತಡಿಯಲ್ಲಿ ಮುಳುಗಿಸಿ ಬಿಡುವುವು. ಸತ್ಯಸ್ವರೂಪನಾದ ಪರಮಾತ್ಮನು ಮಿತಿಮೀರಿದ ಅತ್ಯಾಚಾರಗಳನ್ನು ಎಂದಿಗೂ ಸಹಿಸನು. ಅನಂತರಾಮ ! ನಿನಗೆ ಮಂಗಳವಾಗಲಿ.

---

## ಏಳನೆಯ ಸಂಧಿ.

ಕಾತ್ಯಾಯನೀ ನದಿಯು ಪ್ರವಹಿಸುತ್ತಿರುವುದು. ಅದರ ವಕ್ಷದ ಮೇಲೆ ಒಂದು ಹಡಗು ನಿಂತಿರುವುದು. ಅದರಲ್ಲಿ ನಾವಿಕರು ಸಿದ್ಧರಾಗಿದ್ದರು. ಹಡಗು ಇನ್ನೂ ಪ್ರಯಾಣಕ್ಕೆ ಸಿದ್ಧವಾಗಿರಲಿಲ್ಲ.

ರಾತ್ರಿಯ ಗಾಢವಾದ ಅಂಧಕಾರವನ್ನು ಭೇದಿಸಿಕೊಂಡು ಒಬ್ಬ ಯುವಕನೂ ಒಬ್ಬ ಯುವತಿಯೂ ಹಡಗಿನ ಸಮೀಪಕ್ಕೆ

ಬಂದರು. ಯುವಕನು ತನ್ನ ಎಡದಕೈಯಲ್ಲಿ ಪ್ರಯಾಣಸಾಮಗ್ರಿಯ ಒಂದು ಚೀಲವನ್ನು ಹಿಡಿದುಕೊಂಡು, ಬಲದಕೈಯಿಂದ ಯುವತಿಯನ್ನು ಹಿಡಿದುಕೊಂಡು ಬರುತ್ತಿದ್ದನು. ಯುವಕನು ಮೊದಲು ಹಡಗನ್ನೇರಿದಬಳಿಕ ಯುವತಿಯನ್ನು ಬಹಳ ಎಚ್ಚರಿಕೆಯಿಂದ ಹಡಗಿನೊಳಗೆ ಕರೆದುಕೊಂಡು ತನಗೆ ಸಿದ್ಧವಾಗಿದ್ದ ಒಂದು ಕಿರುಮನೆಯೊಳಗೆ ಪ್ರವೇಶಿಸಿದನು. ನಾವಿಕರು ಹಡಗನ್ನು ಮುಂದಕ್ಕೆ ನಡೆಯಿಸಲಾರಂಭಿಸಿದರು. ಯುವಕನು ಗ್ರಾಮದಕಡೆ ತನ್ನಕಡೆಯ ದೃಷ್ಟಿಯನ್ನು ಬೀರಿ ಉಸ್ ಎಂದು ನಿಟ್ಟುಸಿರನ್ನು ಬಿಟ್ಟನು. ಬಳಿಕ ಯುವತಿಯನ್ನು ಕುರಿತು—ಪ್ರಿಯೆ! ಜನ್ಮಭೂಮಿಯನ್ನು ತ್ಯಾಗಮಾಡುವಾಗ ಉಂಟಾಗುವ ಮನೋವೇದನೆಯನ್ನು ನೋಡಿದೆಯ? ಎಂದುಸುರಿದನು.

ಯುವತಿ—ಮಾಧವ! ತಮ್ಮ ಸಮಸ್ತ ಕ್ಲೇಶಕ್ಕೂ ನಾನೇ ಕಾರಣಳು. ಭಾಗ್ಯಹೀನೆಯಾದ ನನಗೆ ತಾವು ವಿಷಮುಹೂರ್ತದಲ್ಲಿ ತಮ್ಮ ಚರಣಪ್ರಾಂತದಲ್ಲಿ ಒಂದು ಸ್ಥಳವನ್ನು ಕೊಡಬೇಕಾಯಿತು. ನಾನೇನೋ ಧನ್ಯಳಾದೆನು; ತಮಗೆಮಾತ್ರ ನನ್ನಿಂದ ಪರಿಹರಿಯಾದ ಕ್ಲೇಶವು ಮೇಲೆಮೇಲೆ ಬರುತ್ತಿರುವುದು.

ಮಾಧವ—ಪ್ರಾಣೇಶ್ವರಿ, ರಾಧೆ, ನೀನು ಈರೀತಿ ಮಾತನಾಡುವುದನ್ನು ನೋಡಿದರೆ ನನಗೆ ಬಹಳ ವ್ಯಸನವಾಗುವುದು. ನಿನ್ನ ಕೈಹಿಡಿದ ಈ ದಾಸನು ಧನ್ಯನಾಗಿರುವನು. ನಿನ್ನ ದೇವೀಮೂರ್ತಿಯನ್ನು ನಾನು ಆರಾಧಿಸುವುದರಿಂದಲೇ, ನನಗೆ ಆನಂದ, ಉತ್ಸಾಹ, ಆಶೆ, ಪ್ರಯತ್ನ ಇವೆಲ್ಲವೂ ಇರುವುವು. ರಾಧೆ! ನಿನ್ನನ್ನು ವಿವಾಹವಾದ್ದರಿಂದಲ್ಲವೇ, ನಾನು ಈ ಸಂಸಾರವೆಂಬ ಘೋರಯುದ್ಧದಲ್ಲಿ ಬದ್ಧಕಂಕಣನಾಗಿ ನಿಂತಿರುವುದು. ನಿನ್ನ ವಿಯೋಗದಲ್ಲಿ ನನಗುಂಟಾಗುವ ಯಾತನೆಯನ್ನು ನೀನಿರುವಾಗ ನಿನ್ನೆದಿರಿಗೆ ವರ್ಣನೆಮಾಡಲು

ಸಾಧ್ಯವಲ್ಲ. ನೀನು ನನಗೆ ನಿತ್ಯವೂ ಮಂಗಳಮಯಿಯಾದ ಆರಾಧ್ಯ ದೇವತೆ. ಹೀಗಿರುವಾಗ ನಿನ್ನಿಂದ ನನಗೆ ತೊಂದರೆಯೆಂದರೇನು ?

ರಾಧಾ—ತಾವು ನನ್ನನ್ನು ಈರೀತಿಯಾಗಿ ಭಾವಿಸುವುದು ನನ್ನ ಪೂರ್ವಾರ್ಜಿತಪುಣ್ಯವಿಶೇಷವೇ ಸರಿ. ತಾವು ನನಗಾಗಿ ಎಷ್ಟು ಶ್ರಮ ಪಟ್ಟಿರಿ, ಎಷ್ಟು ದುಃಖವನ್ನು ಸಹಿಸಿದಿರಿ ; ಎಷ್ಟು ನಿಂದೆಯನ್ನು ಕೇಳಿದಿರಿ. ಆದರೂ ಅದಾವುದನ್ನೂ ಲೆಕ್ಕಿಸದೆ ತಾವು ನನ್ನನ್ನು ಈರೀತಿಯಾಗಿ ಪ್ರೀತಿಸುವುದು ನನ್ನ ಭಾಗ್ಯೋದಯವೇ ಎಂದು ಹೇಳಬೇಕು ತಮ್ಮ ಪ್ರೀತಿಗೆ ಪ್ರತಿಯಾಗಿ ನಾನು ಇಲ್ಲದ ಕ್ಲೇಶ ವನ್ನೇ ಕೊಡುತ್ತಿರುವೆನು. ನನ್ನಿಂದ ತಮಗೆ ಸುಖವಾಗುವ ಯೋಗವು ನನ್ನ ಹಣೆಯಲ್ಲಿ ಬರೆಯದೇ ಇರುವುದಕ್ಕಾಗಿ ನಾನು ಪರಮನೀಚಳು. ಇಷ್ಟೇ ಅಲ್ಲದೆ ನನ್ನ ದೌರ್ಭಾಗ್ಯವನ್ನು ತಮಗೆ ಇನ್ನೂ ತಿಳಿಸುವೆನು. ಜನರು ನನ್ನ ವಿಷಯದಲ್ಲಿ ನಾನಾಪ್ರಕಾರವಾಗಿ ಆಡಿಕೊಳ್ಳಲು ಉಪಕ್ರಮಿಸಿದರು. ನನ್ನ ವಂಶವು ಅಪವಿತ್ರವೆಂದೂ ಮಾತಾಪಿತೃಗಳು ಸಚ್ಚರಿತ್ರರಲ್ಲವೆಂದೂ, ನಾನು ಆರ್ಯಮಹಿಳೆಯಲ್ಲ ವೆಂದೂ, ನಾನು ಭೋಗಾಪೇಕ್ಷೆಯಿಂದ ನಿಮ್ಮನ್ನು ಕೂಡಿದವಳೇ ಹೊರತು, ವಿಧಿವತ್ತಾಗಿ ವಿವಾಹಿತಳಾದ ಪತ್ನಿಯಲ್ಲವೆಂದೂ, ತಾವು ನನ್ನನ್ನು ಪರಿಗ್ರಹಿಸಿದ್ದರಿಂದ ತಾವು ಕುಲಚ್ಯುತರೆಂದೂ, ತಮ್ಮಲ್ಲಿ ಆಹಾರವ್ಯವಹಾರಗಳನ್ನಿಟ್ಟುಕೊಳ್ಳುವವರಿಗೆ ಜಾತಿನೀತಿಗಳು ಲುಪ್ತ ವಾಗಿ ಹೋಗುವುವೆಂದೂ, ನನ್ನನ್ನೂ ನನ್ನ ಸಂಪರ್ಕದಿಂದ ತಮ್ಮ ನ್ನೂ ಪರಿಪರಿಯಾಗಿ ನಿಂದೆಗೆ ಗುರಿಮಾಡಿರುವುದನ್ನು ನಾನು ಕಿವಿ ಯಾರ ಕೇಳಿರುವೆನು. ಜನರು ನನ್ನನ್ನು ನಿಂದಿಸುವುದಾದರೂ ನಿಂದಿ ಸಲಿ ; ನನ್ನಿಂದ ತಮಗೆ ನಿಂದೆಯು ಬಂದಿದ್ದರಿಂದ ನಾನು ಬಹಳವಾಗಿ ಕೊರಗಬೇಕಾಗಿರುವುದು.

ಮಾಧವ—ಪ್ರಿಯೆ! ನಿನ್ನ ಕುಲಶೀಲಗಳನ್ನು ನಾನು ಬಲ್ಲೆನು.

ಸ್ವಾರ್ಥೈಕಪರಾಯಣರಾಗಿಯೂ, ಪರೋತ್ಕರ್ಷಾಸಹಿಷ್ಣುಗಳಾಗಿಯೂ ಇರುವ ಅವಿವೇಕಗಳೆನಿಸಿದ ಜನರು ಮನಬಂದಂತೆ ಬೊಗಳಿಕೊಳ್ಳಲಿ, ಇದಕ್ಕಾಗಿ ನಾನು ಹೆದರತಕ್ಕವನಲ್ಲ. ನಿನ್ನ ಸಂಪರ್ಕದಿಂದ ಜನರು ನನ್ನನ್ನು ತೊಂದರೆಗೀಡುಮಾಡಿ ನನ್ನ ಜೀವನದ ಬಾಯಿಗೆ ಕಲ್ಲುಹಾಕಿದರು. ಹುಟ್ಟಿಸಿದ ದೇವರು ನಮಗೆ ಗತಿಯನ್ನು ಕಲ್ಪಿಸಿಕೊಟ್ಟಿರುವಾಗ, ನಾವು ಯಾರಿಗೂ ಹೆದರಬೇಕಾಗಿಲ್ಲ. ನಮ್ಮ ಜನ್ಮಸ್ಥಳದಲ್ಲಿ ಜೀವನಕ್ಕೆ ತೊಂದರೆಯುಂಟಾದರೆ ಬೇರೆ ಸ್ಥಳಗಳಿಲ್ಲವೆ? ದುಷ್ಟರ ಸಹವಾಸದಿಂದ ದೂರನಾಗಿ ಪರಸ್ಥಳದಲ್ಲಿ ಬದುಕುವುದಕ್ಕಾಗಿಯೇ ಇಂದು ನಾನು ನಿನ್ನೊಡನೆ ತೆರಳಿರುವುದು. ಕಾಪಿಡುವ ದೇವರು ಎಲ್ಲಿದ್ದರೂ ಕಾಪಿಡುವನು. ಇದಕ್ಕಾಗಿ ನೀನು ವ್ಯಸನಪಡಬೇಕಾದುದಿಲ್ಲ.

ದಂಪತಿಗಳು ಈರೀತಿಯಾಗಿ ತಮ್ಮ ತಮ್ಮ ಪೂರ್ವಾವಸ್ಥೆಯನ್ನು ಕುರಿತು ಮಾತನಾಡಿಕೊಳ್ಳುತ್ತಿರುವಾಗ, ಅರುಣೋದಯವಾಯಿತು. ಅಷ್ಟುಹೊತ್ತಿಗೆ ಹಡಗೂ ಬಂದು ದಡದಲ್ಲಿ ನಿಂತಿತು. ಮಾಧವನು ನಾವಿಕರಿಗೆ ಸಲ್ಲಿಸಬೇಕಾದ ಬಾಡಿಗೆಯನ್ನು ಕೊಟ್ಟು ತನ್ನ ಹೆಂಡತಿಯೊಡನೆ ಹಡಗಿನಿಂದಿಳಿದನು. ಇಬ್ಬರೂ ಕಾಲುದಾರಿಯನ್ನು ಹಿಡಿದು ನಡೆಯಲಾರಂಭಿಸಿದರು. ಕೊಂಚಹೊತ್ತಿನಲ್ಲಿಯೇ ರಾಧೆಯು ಒಂದು ಗಿಡದಕೆಳಗೆ ಯಾರೋ ಸತ್ತಂತೆ ಬಿದ್ದಿರುವುದನ್ನು ನೋಡಿ ಭಯಪಟ್ಟವಳಾಗಿ ಮಾಧವನಿಗೆ ತಿಳಿಸಿದಳು. ಇಬ್ಬರೂ ಅಲ್ಲಿಗೆ ಹೋಗಿ ನೋಡಿದರು. ಮಾಧವನು ದೇಹವನ್ನು ಪರೀಕ್ಷಿಸಿ, ರಾಧೆ, ಅಪರಿಚಿತನು ಮೃತನಲ್ಲ; ಮೃತಪ್ರಾಯನಾಗಿರುವನು. ಈಗ ಸರಿಯಾದ ಚಿಕಿತ್ಸೆಯಾಗದಿದ್ದಲ್ಲಿ ಈತನು ಬದುಕುವ ಸಂಭವವಿಲ್ಲ. ಎನಲಾಗಿ, ರಾಧೆಯು —ಈಗ ಉದಾಸೀನರಾಗಿರುವುದಕ್ಕೆ ಕಾಲವಲ್ಲ. ನಮ್ಮ ಕಷ್ಟವಾದರೋ ಇದ್ದೇ ಇರುವುದು. ಹೇಗಾದರೂಮಾಡಿ

ಈ ಅಪರಿಚಿತನನ್ನು ಬದುಕಿಸಲು ಯತ್ನಮಾಡಬೇಕು, ಎಂದಳು.

ರಾಧಾಮಾಧವರಿಬ್ಬರೂ ಅಸಾಧ್ಯವಾದ ಕೆಲಸದ ಸಾಧನೆಯಲ್ಲಿ ಉದ್ಯುಕ್ತರಾದರು.

## ಎಂಟನೆಯ ಸಂಧಿ.

---

ಮಧ್ಯಾಹ್ನ ಎರಡುಗಂಟೆಯಾಗಿರುವುದು. ಸೂರ್ಯನು ಸಹಿಸಲಸಾಧ್ಯವಾದ ತನ್ನ ತಾಪವನ್ನು ಭೂಮಿಯಮೇಲೆ ಬೀರಿ ಪ್ರಾಣಿಗಳನ್ನು ತಪಿಸುವಂತೆ ಮಾಡುತ್ತಿರುವನು. ಬಿಸಲಿನ ಭೀತಿಯಿಂದ ಯಾವ ಪ್ರಾಣಿಯೂ ಹೊರಗೆ ತಲೆಹಾಕಿಲ್ಲ. ಇಂತಹ ಸಮಯದಲ್ಲಿ ಆನಂದವಾಡಿ ಗ್ರಾಮದಲ್ಲಿ ಪರಿಷ್ಕಾರವಾದ ಮನೆಯ ಒಂದು ಕೋಣೆಯಲ್ಲಿ ಒಂದು ವ್ಯಕ್ತಿಯು ಹಾಸಿಗೆಯಮೇಲೆ ಮಲಗಿ ನಿದ್ರೆಮಾಡುತ್ತಿದ್ದಿತು. ಆ ವ್ಯಕ್ತಿಗೆ ಕೊಂಚದೂರದಲ್ಲಿ ಒಬ್ಬ ಭುವನಮೋಹಿನಿಯಾದ ಯುವತಿಯೊಬ್ಬಳು ಕುಳಿತುಕೊಂಡು ಅವುದೋ ಪುಸ್ತಕವನ್ನು ಓದುತಿದ್ದಳು. ಆಕೆಯೇ ರಾಧಾ. ರಾಧೆಯು ಬೇಸರದಿಂದ ಪುಸ್ತಕವನ್ನು ಕೆಳಗಿಡಲು, ಆ ವ್ಯಕ್ತಿಗೆ ನಿದ್ರಾಭಂಗವಾಯಿತು. ಒಳಿಕ ವ್ಯಕ್ತಿಯು ಎದ್ದು ಕುಳಿತು—ಅಕ್ಕ! ಬಹಳ ಹೊತ್ತಿನಿಂದಲೂ ನೀನು ಇಲ್ಲಿಯೇ ಕುಳಿತಿರುವೆಯಾ ? ಎಂದು ಕೇಳಿದನು.

ರಾಧಾ—ಕುಳಿತಿರುವೆನು.

ವ್ಯಕ್ತಿ—ಅಕ್ಕ ! ನಿನ್ನ ಸ್ನೇಹವೆಂಬುದು ದೇವಲೋಕದ ಸಾಮಗ್ರಿ. ನಾನು ದುಷ್ಟನ ಆಘಾತದಿಂದ ಸತ್ತುಹೋಗಿದ್ದೆನು. ನನಗೆ ಕೊಂಚ ಜ್ಞಾನಬಂದಮೇಲೆ,ನಾನು ಆನಂದವಾಡಿಯಲ್ಲಿರುವುದಾಗಿಯೂ, ನೀನೂ ನಿನ್ನ ಯಜಮಾನನೂ ನನ್ನನ್ನು ರಕ್ಷಿಸಿದಿರೆಂಬುದಾಗಿಯೂ ಗೊತ್ತಾಯಿತು. ರಾಧಾಬಾಯಿ ! ನನ್ನ ವಿಷಯದಲ್ಲಿ ಇಷ್ಟು ಶ್ರಮವನ್ನು ನೀವು ತೆಗೆದುಕೊಳ್ಳುವುದೇತಕೆ ? ಆಹಾರನಿದ್ರಾ,

ದಿಗಳಿಲ್ಲದೆ ನೀವು ಬಹಳವಾಗಿ ಕಂಗೆಟ್ಟಿರುವಿರಿ. ನಾನೀಗ ಸುಖ ವಾಗಿರುವೆನು. ನನಗಾಗಿ ನೀವು ಚಿಂತಿಸಬೇಕಾಗಿಲ್ಲ.

ರಾಧಾಬಾಯಿಯು ಈ ಮಾತನ್ನು ಕೇಳಿ ಅತ್ತುಬಿಟ್ಟಳು. ವ್ಯಕ್ತಿಯು ಆಕೆಯನ್ನು ಕುರಿತು—ಅಕ್ಕ! ನೀನು ಹೀಗೆ ಅಳಲು ಕಾರಣವೇನು? ಎಂದನು.

ರಾಧಾ—ವಿನಯ! ಈ ಜಗತ್ತಿನಲ್ಲಿ ಪತಿಹೊರತು ನನಗೆ ಮತ್ತಾರೂ ದೇಹಾನುಬಾಧಿಗಳಿಲ್ಲ ನನಗೆ ತಂದೆಯಿಲ್ಲ, ತಾಯಿಯಿಲ್ಲ. ಅಕ್ಕತಂಗಿ, ಅಣ್ಣತಮ್ಮಂದಿರು ಮೊದಲೇಯಿಲ್ಲ. ನಾನಾದರೋ ನನ್ನ ಪತಿಯು ಆದರದಿಂದ ಪ್ರಾಣವನ್ನಿಟ್ಟುಕೊಂಡಿರುವೆನು ಲೋಕ ವಾದರೋ ನನ್ನನ್ನು ಮಿಥ್ಯಾಪವಾದಕ್ಕೆ ಗುರಿಮಾಡಿರುವುದು. ಇಂತಹ ನನ್ನನ್ನು ನೀನು ಅಕ್ಕ, ಅಕ್ಕ, ಎಂದು ಸಂಬೋಧಿಸುವುದು ನೋಡಿ ದರೆ ನನ್ನ ಸಂತೋಷಕ್ಕೆ ಪಾರವೇ ಇಲ್ಲ. ನನಗೆ ಗುಣವಂತನಾದ ಒಬ್ಬ ತಮ್ಮನೂ ಇರುವನೆಂದು ಸಂತೋಷವುಂಟಾಗಿ ಕಣ್ಣುಗಳಿಂದ ಆನಂದಬಾಷ್ಪವು ಸುರಿಯುತ್ತಿರುವುದು.

ವಿನಯಕುಮಾರ—ಅಕ್ಕ! ಸಮಸ್ತಸದ್ಗುಣಗಳಿಗೂ ಆಕರ ವಾಗಿರುವ ನಿನಗೆ ಮಿಥ್ಯಾಪವಾದವೆಂದರೇನು? ನನಗೆ ತಿಳಿಸುವುದ ರಿಂದ ನಿನಗೆ ತೊಂದರೆಯುಂಟಾಗುವುದಾದರೆ, ನಾನು ಆ ವಿಷಯ ವನ್ನು ಮತ್ತೆ ಕೇಳುವುದಿಲ್ಲ.

ರಾಧಾ—ಲೋಕವೆಲ್ಲವೂ ಆಡುತ್ತಿರುವ ಮಾತನ್ನು ನಿನಗೆ ತಿಳಿಸುವುದರಿಂದ ತೊಂದರೆ ಏನು? ನಾನು ನಿರ್ದುಷ್ಟಳಾಗಿರುವ ವರೆಗೂ ಯಾವ ನಿಂದೆಯೂ ನನಗೆ ಬಾಧೆಯನ್ನುಂಟುಮಾಡಲಾರದು.

ರಾಧೆಯು ಹೀಗೆಹೇಳಿ, ತನ್ನ ಪೂರ್ವವೃತ್ತಾಂತವೆಲ್ಲವನ್ನೂ ವಿನಯನಿಗೆ ತಿಳಿಸಿದಳು. ವಿನಯನು ಇದನ್ನು ಕೇಳಿ ಬಹಳ ವ್ಯಸನ ಪಟ್ಟವನಾಗಿ—ಅಕ್ಕ! ಇದಕ್ಕಾಗಿ ನೀನು ವ್ಯಸನಪಡಬೇಕಾಗಿಲ್ಲ.

ಭಗವಂತನು ಸತ್ಯಸಂಧನಾಗಿದ್ದು ಧರ್ಮವು ಲೋಕವನ್ನು ರಕ್ಷಿಸುವು ದಾದರೆ ಮಹಾತ್ಮರಿಗೆ ಭಯವಾವುದು? ದೇವರು ಸಮಸ್ತದೋಷ ವನ್ನೂ ದೂರಮಾಡಿ ನಿನಗೆ ಮಂಗಳವನ್ನುಂಟುಮಾಡುವನು, ಎಂದು ಹೇಳಿ ಮತ್ತೆ—ಅಕ್ಕ! ನಾನು ಅನಾಥನಾಗಿಯಲ್ಲಿರುವುದು ಗೊತ್ತಾ ಯಿತು. ಈಗ ನಾನು ಯಾರ ಮನೆಯಲ್ಲಿರುವೆನು? ನಿನ್ನ ಹಿಂದಿನ ವೃತ್ತಾಂತವನ್ನು ಕೇಳಿದರೆ, ನಿಮಗೆ ಈಗ ಜೀವನಕ್ಕೆ ಬಹಳ ತೊಂದರೆಯೆಂದು ಗೊತ್ತಾಗುವುದು. ಹೀಗಿರುವಲ್ಲಿ ನನ್ನ ಆರೋಗ್ಯ ಕ್ಕಾಗಿ ನೀವು ಇಷ್ಟೊಂದು ಹಣವನ್ನು ವೆಚ್ಚಮಾಡಿದ ಬಗೆಹೇಗೆ? ಎಂದು ಕೇಳಿದನು.

ರಾಧಾ—ಇದೆಲ್ಲವೂ ದೈವಯೋಗದಿಂದ ಉಂಟಾಯಿತೆಂದೇ ಹೇಳಬೇಕು. ಒಬ್ಬ ಮಹಾತ್ಮನು ಕೃಪೆಯಿಟ್ಟು ನಮಗೆ ಸಹಾಯ ನಾಗದ ಪಕ್ಷದಲ್ಲಿ ಅವಾರ್ಗನೇ ಬೇರೆಯಾಗಿರುತ್ತಿದ್ದತು.

ಗಿಡದ ಕೆಳಗೆ ಮೃತಪ್ರಾಯನಾಗಿ ಬಿದ್ದಿದ್ದ ನಿನ್ನನ್ನು ನಾವು ಇಲ್ಲಿಗೆ ಕರೆದುಕೊಂಡುಬಂದೆವು. ಬಳಿಕ ನಿನ್ನ ವಿಷಯವಾಗಿ ನಮಗೆ ವಿಶೇಷವಾದ ಯೋಚನೆಯುಂಟಾಯಿತು. ಆದರೂ ನನ್ನ ಪತಿಯು ದೇವರ ಮೇಲೆ ಭಾರಹಾಕಿ ಭಿಕ್ಷೆಬೇಡಿ ನಿನ್ನನ್ನು ರಕ್ಷಿಸುವುದಾಗಿ ಸಂಕಲ್ಪಮಾಡಿಕೊಂಡು ಹೊರಗೆ ಹೊರಟರು. ಆಗ ಮಹಾತ್ಮ ರೊಬ್ಬರು ಇದಿರಿಗೆ ಬಂದು ನನ್ನ ಸ್ವಾಮಿಯಿಂದ ಎಲ್ಲವನ್ನೂ ತಿಳಿದು ಕೊಂಡು, ಇನ್ನೂರು ರೂಪಾಯಿಗಳನ್ನು ಕೊಟ್ಟು ಹೊರಟು ಹೋದರು. ಆ ಮಹಾತ್ಮರು ಪ್ರತಿದಿನವೂ ನಿನ್ನನ್ನು ನೋಡುವುದ ಕ್ಕಾಗಿ ಬರುತ್ತಿದ್ದರು. ನಿನಗೆ ಆರೋಗ್ಯವಾದಂದಿನಿಂದಲೂ ಅವರು ಮೊದಲಿನಂತೆ ಬರುತ್ತಿಲ್ಲ.

ವಿನಯ—ಅಕ್ಕ! ಆ ಮಹಾತ್ಮರಾರು?

ರಾಧಾ—ಆತನ ಹೆಸರು ಪುರುಷೋತ್ತಮರಾಯ. ಮಿಕ್ಕ ಸಂಗತಿಗಳು ನನಗೆ ತಿಳಿಯದು.

ಹೀಗೆ ಸಂಭಾಷಣೆಯು ನಡೆಯುತ್ತಿರುವಲ್ಲಿ ಹೊರಗಿನಿಂದ ಯಾರೋ ಒಳಗೆ ಬರುತ್ತಿರುವ ಶಬ್ದವು ಕೇಳಿಸಿತು. ರಾಧೆಯು ಹೊರಗೆ ನೋಡಿದಳು. ತನ್ನ ಪತಿ, ಪುರುಷೋತ್ತಮರಾಯ ಇವರಿಬ್ಬರೂ ಬರುತ್ತಿದ್ದರು. ಕೂಡಲೆ ರಾಧೆಯು ಅಲ್ಲಿಂದೆದ್ದು ಮನೆಯೊಳಗೆ ಹೊರಟುಹೋದಳು.

ಪುರುಷೋತ್ತಮನು ಮಾಧವನೊಡನೆ ಕೋಣೆಯೊಳಗೆ ಬಂದು ವಿನಯನ ಹಾಸಿಗೆಯ ಹತ್ತಿರ ನಿಂತುಕೊಂಡನು. ಮಾಧವನು ವಿನಯನನ್ನು ಕುರಿತು—ವಿನಯ! ನಿನಗೆ ಪ್ರಾಣವನಿತ್ತ ಮಹಾತ್ಮರಾದ ಪುರುಷೋತ್ತಮರಾಯರು ಬಂದಿರುವರು, ಎಂದ ಕೂಡಲೆ, ವಿನಯನು ಹಾಸಿಗೆಯಿಂದೆದ್ದು ಪುರುಷೋತ್ತಮನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಪುರುಷೋತ್ತಮನು ವಿನಯನಿಗೆ ಕಾಲೋಚಿತವಾದ ಆಶೀರ್ವಾದವನ್ನು ಮಾಡಿ,—ವಿನಯ! ನಿನಗೆ ಸಂಪೂರ್ಣವಾಗಿ ಆರೋಗ್ಯಲಾಭವಾಗಿರುವುದು. ಮುಂದೆ ನೀನು ಎಲ್ಲಿಗೆ ಹೋಗಬೇಕೆಂಬುದು ನಿಶ್ಚಯಮಾಡಿಕೊಂಡು ಇದ್ದೀಯೆ? ಎಂದು ಕೇಳಿದನು. ಅದಕ್ಕೆ ವಿನಯನು—ಮಹಾಶಯ! ತಮ್ಮ ಕೃಪೆಯಿಂದ ನಾನು ಬದುಕಿರುವೆನಾದ ದರಿಂದ, ನಾನು ತಮ್ಮಲ್ಲಿ ಚಿರಕಾಲ ಋಣಿಯಾಗಿರುವೆನು. ಈಗ ನಾನು ದೇವಪುರಕ್ಕೆ ಹೋಗಬೇಕೆಂದಿರುವೆನು.

ಪುರುಷೋತ್ತಮ—ನೀನು ನನ್ನ ವಿಷಯದಲ್ಲಿ ಇಷ್ಟು ಹೇಳಬೇಕಾದ್ದಿಲ್ಲ, ಏತಕೆಂದರೆ—ನಾನು ನಿನಗೆ ಅಪರಿಚಿತನಲ್ಲ. ನಿನ್ನ ತಂದೆಯೂ ನಾನೂ ಮೊದಲು ಮೊದಲು ಬಹಳ ಸ್ನೇಹಿತರಾಗಿದ್ದೆವು. ಅನಂತರ ಒಂದು ಸಾಮಾನ್ಯವಾದ ಕಾರಣಕ್ಕಾಗಿ ನಾನು ನಿನ್ನ ತಂದೆಯೊಡನೆ ಕಲಹಮಾಡಿದೆನು. ಅಂದುಮೊದಲು ನಾನು ನಾಚಿಕೆ

ಯಿಂದ ಗೋಪ್ಯವಾಗಿ ಕಾಲಕ್ಷೇಪಮಾಡುತ್ತಿರುವೆನು. ನನ್ನ ತಪ್ಪು ನನಗೆ ಗೊತ್ತಾಗಿ, ಮತ್ತೆ ನಿನ್ನ ತಂದೆಯೊಡನೆ ಸದ್ವ್ಯವಹಾರವನ್ನು ಮಾಡಬೇಕೆಂದು ಕಾಲವನ್ನು ನಿರೀಕ್ಷಿಸುತ್ತಿದ್ದೆನು. ಈ ಅನುಕೂಲ ಕಾಲವು ನಿನ್ನಮೂಲಕ ಒದಗಿಬಂದುದರಿಂದ ನಾನೇ ಧನ್ಯನು. ಈ ಮಾತು ಹಾಗಿರಲಿ. ನನ್ನಿಂದ ನೀನು ಬದುಕಿರುವುದಾಗಿ ಹೇಳಿದೆ. ಅದು ತಪ್ಪು. ಸಚ್ಚರಿತ್ರರಾದ ಉದಾರಸ್ವಭಾವವುಳ್ಳ ರಾಧಾಮಾಧವರು ನಿನಗೆಮಾಡಿದ ಉಪಕಾರ ಚಿರಸ್ಮರಣೀಯವಾಗಿರುವುದು. ಅವರು ಯತ್ನಮಾಡದಿದ್ದರೆ ನೀನು ಬದುಕುವಸಂಭವವೇ ಇರಲಿಲ್ಲ. ಆದುದರಿಂದ ನೀನು ಅವರ ವಿಷಯದಲ್ಲಿ ಕೃತಜ್ಞನಾಗಿರಬೇಕು.

ವಿನಯ—ದೇವತಾಸ್ವರೂಪರಾದ ರಾಧಾಮಾಧವರ ಉಪಕಾರವನ್ನು ಸ್ಮರಿಸುವುದಕ್ಕೂ ನನಗೆ ಯೋಗ್ಯತೆಸಾಲದು. ಹೀಗಿರುವಲ್ಲಿ ನಾನವರಿಗೆ ಯಾವಪ್ರತ್ಯುಪಕಾರವನ್ನುಮಾಡಿ ನನ್ನ ಜನ್ಮವನ್ನು ಸಾರ್ಥಕಗೊಳಿಸಲಿ. ಆದರೆ ಅವರಮೇಲೆ ಬಂದಿರುವ ಲೋಕಸಮಾಜದ ಮಿಥ್ಯಾಪವಾದವನ್ನು ಕೇಳಿ ನನ್ನ ಮನಸ್ಸು ವ್ಯಾಕುಲವಾಗಿರುವುದು. ಅದನ್ನು ನಿವಾರಣೆಮಾಡುವ ಬಗೆಗೆ ನನ್ನ ಮನಸ್ಸು ಕೇವಲ ಆತುರವಾಗಿರುವುದು.

ಪುರುಷೋತ್ತಮ—ನನಗೆ ಅದೆಲ್ಲವೂ ಗೊತ್ತು. ಆಧಾರವಿಲ್ಲದ ಮಿಥ್ಯಾಪವಾದವನ್ನು ನಿವಾರಣೆಮಾಡುವುದಕ್ಕಾಗಿ ನಾನು ಯತ್ನಮಾಡಿರುವೆನು. ನೀನು ಆ ವಿಷಯದಲ್ಲಿ ಯೋಚಿಸಬೇಕಾದ್ದಿಲ್ಲ.

ವಿನಯ—ಮಹಾಪುರುಷರೆನಿಸಿದ ತಮ್ಮಿಂದ ಈ ಮಾತುಕೇಳಿ ನನ್ನ ಹೃದಯವು ಈಗ ಶಾಂತವಾಯಿತು. ಈಗಲಾದರೋ ನನ್ನ ಕೃತಜ್ಞತೆಯು ಸಹಸ್ರಗುಣವಾಗಿ ಹೆಚ್ಚುತ್ತಿರುವುದು.

ಪುರುಷೋತ್ತಮ—ಈಗ ವ್ಯರ್ಥವಾದ ಮಾತುಗಳಿಂದ ಕಾಲವನ್ನು ಕಳೆಯುವುದು ಚೆನ್ನಾಗಿಲ್ಲ. ನಿನಗೆ ಸಂಭವಿಸಿರುವ ವಿಪತ್ತಿ

ಲ್ಲಿ ಪ್ರೂ ನನಗೆ ತಿಳಿಯದೇ ಇಲ್ಲ. ನೀನು ಮನೆಯನ್ನು ಬಿಟ್ಟು ಹೊರಟ ನಂತರ ನಿನಗೆ ಅನೇಕ ವಿಪತ್ತುಗಳು ಸಂಭವಿಸಿರುವುವು. ಈಗ ಅವುಗಳನ್ನು ತಿಳಿಸಿ ಪ್ರಯೋಜನವಿಲ್ಲ. ಅದಕ್ಕಾಗಿ ನೀನು ಈಗಿನಿಂದಲೂ ವ್ಯಸನಪಟ್ಟುಕೊಳ್ಳುವ ಆವಶ್ಯಕವೂ ಇಲ್ಲ. ಸಂಪ್ರತಿ ನಿನ್ನ ತಂದೆಯು ದೇವಪುರದಲ್ಲಿರುವರು. ನೀನು ರಾಧಾಮಾಧವರನ್ನು ಜತೆಯಲ್ಲಿ ಕರೆದುಕೊಂಡು ಅವರಿದ್ದಲ್ಲಿಗೆ ಹೊರಡು. ಲೀಲಾವತಿಯ ಅನುಸಂಧಾನದಲ್ಲಿ ನಾನು ಯತ್ನಮಾಡಿರುವೆನು. ಆಕೆಯು ಶೀಘ್ರದಲ್ಲಿಯೇ ಸಿಕ್ಕುವ ಸಂಭವವಿರುವುದು. ಈಗ ಗುರುತರವಾದ ಅನೇಕ ಕಾರ್ಯಗಳನ್ನು ಕೈಗೊಂಡಿರುವುದರಿಂದ, ನಾನು ಮತ್ತೊಂದು ಸಲ ನಿನ್ನನ್ನು ದೇವಪುರದಲ್ಲಿ ನೋಡುವೆನು.

ಪುರುಷೋತ್ತಮನು ಹೀಗೆಹೇಳಿ ವಿನಯನಿಂದ ಪ್ರತ್ಯುತ್ತರವನ್ನು ನಿರೀಕ್ಷಿಸದೇ ಹೊರಟುಹೋದನು. ವಿನಯನು ಹಠಾತ್ತಾಗಿ ಪುರುಷೋತ್ತಮನು ಹೊರಟುಹೋದುದನ್ನು ನೋಡಿ ಅಚ್ಚರಿಗೊಂಡವನಾಗಿ ಮಾಧವನನ್ನು ಕುರಿತು—ಮಹಾಶಯ! ಈ ಮಹಾತ್ಮನಾರು? ಎಂದನು.

ಮಾಧವ—ಈತನ ವಿಷಯದಲ್ಲಿ ನಿನಗೆ ಎಷ್ಟು ಗೊತ್ತಿರುವುದೋ ನನಗೂ ಅಷ್ಟೇ ಗೊತ್ತಿರುವುದು. ಪ್ರಕೃತ ನಾವೆಲ್ಲರೂ ದೇವಪುರಕ್ಕೆ ಹೋಗಬೇಕಾಗಿರುವುದು. ಅಲ್ಲಿ ಎಲ್ಲವೂ ಗೊತ್ತಾಗುವುದು.

ಮಾರನೆಯ ದಿನ ವಿನಯ, ರಾಧಾ, ಮಾಧವ, ಇವರು ದೇವಪುರಕ್ಕೆ ತೆರಳಲು ಸಿದ್ಧರಾದರು. ಹೊರಡುವುದಕ್ಕೆ ಕೊಂಚ ಮುಂಚೆ ವಿನಯನು ಬಂದು ಕೋಣೆಯಲ್ಲಿ ಕುಳಿತು ಬಗೆಬಗೆಯಾಗಿ ಯೋಚಿಸಲಾರಂಭಿಸಿದನು. ಅದೇನೆಂದರೆ—ಲೀಲಾವತಿಯು ಈಗ ಎಲ್ಲಿರುವಳು? ನೀಚನ ಕೈಗೆಸಿಕ್ಕಿ ಆಕೆಯು ಪಡಬಾರದ ಕಷ್ಟವನ್ನು

ಅನುಭವಿಸುತ್ತಿರುವಳಲ್ಲ ! ಅವಳನ್ನು ಉದ್ಧಾರಮಾಡಲೋಸುಗ ಯತ್ನಮಾಡಿದ ವಿನಯನು ದುಷ್ಟರಕೈಗೆ ಸಿಕ್ಕಿ ಮೃತ್ಯುವಿಗೆ ತುತ್ತಾಗಿ ಹೋಗಿದ್ದನು. ಆಯುಶ್ಶೇಷವಿರುವುದಾದರೆ ಯಾರಾದರೂ ಕಾಪಿಡುವರು. ನನ್ನ ತಂದೆಯು ದೇವಪುರಕ್ಕೆ ಬಂದಿರುವನೆಂದು ಪುರುಷೋತ್ತಮರಾಯರು ಹೇಳಿದರು. ಮನೆ ಬಾಗಿಲು ಬಿಟ್ಟು ಅವರಿಗೆ ಅಲ್ಲೇನು ಕೆಲಸ? ಬಹುಶಃ ತಂದೆಯು ನನ್ನನ್ನು ಹುಡುಕುವುದಕ್ಕಾಗಿ ಅಲ್ಲಿಗೆ ಹೋಗಿರಬೇಕು. ಆತನಿಗೆ ವಿಪತ್ತುಂಟಾಯಿತೆಂದು ಕೇಳಿದೆನು. ಅದೇನಿರಬಹುದು? ವೀರನಾರಾಯಣ, ಅವನ ಮಗ ಉನ್ಮತ್ತರಾಘವ ಇವರಿಬ್ಬರೂ ಜೀವಂತರಾಗಿರುವಾಗ ಯಾವುದುತಾನೆ ಅಸಂಭವ. ಬಂದ ವಿಪತ್ತನ್ನು ಅನುಭವಿಸಿಯೇ ತೀರಬೇಕು. ಇನೂ ಹಾಗಿರಲಿ.

ಪುರುಷೋತ್ತಮನಾರು? ಆತನು ನನ್ನ ತಂದೆಗೆ ಸ್ನೇಹಿತನಾಗಿದ್ದು, ಅನಂತರ ಕಾರಣಾಂತರದಿಂದ ದ್ವೇಷಿಯಾದನೆಂದು ಕೇಳಿದ್ದೆನು. ನನ್ನ ಕಷ್ಟದಲ್ಲಿ ಅಕಾರಣವಾದ ಪ್ರೀತಿಯನ್ನು ತೋರಿಸಿದ ರಾಯರು ಮಹಾಪುರುಷರೇ ಸರಿ. ಮಹಾತ್ಮರು ಅಸ್ವದ್ವ್ಯವಹಾರದಲ್ಲಿ ನಿರತರಾಗುವರೆಂದರೇನು? ಇದರಲ್ಲೇನೋ ತತ್ತ್ವವಿರಬೇಕು. ಈ ರಹಸ್ಯಜಾಲವನ್ನು ಭೇದಿಸಿ ತಿಳಿದುಕೊಳ್ಳುವೆನು.

ವಿನಯನು ಈ ರೀತಿಯಾಗಿ ಯೋಚಿಸುತ್ತಿರುವಲ್ಲಿ, ಉನ್ಮತ್ತರಾಘವ ಮತ್ತು ಕರಾಳರಾಯ ಇವರಿಬ್ಬರೂ ರಂಗಪಟ್ಟಣಕ್ಕೆ ಬಂದಿರುವರೆಂದೂ, ಅಲ್ಲಿಯೇ ಲೀಲಾವತಿಯನ್ನು ಕರಾಳನಿಗೆ ಕೊಟ್ಟು ವಿವಾಹಮಾಡಲು ಯತ್ನವು ನಡೆದಿರುವುದೆಂದೂ, ಸುದ್ದಿಯು ವಿನಯನ ಕಿವಿಯಲ್ಲಿ ಬಿದ್ದಿತು. ಜೀವದ್ದಶೆಯಲ್ಲಿ ವಿನಯನಿಗೆ ನರಕಯಾತನೆಯು ಬೇರೊಂದು ಆವಶ್ಯಕವಿರಲಿಲ್ಲ. ಈ ಮರ್ಮವಿದಾರಿಣಿಯಾದ ವಾರ್ತೆಯನ್ನು ಕೇಳಿದ ಕೂಡಲೆ ವಿನಯನು ಮಾಧವನ ಮುಖವನ್ನು ನೋಡಲಾಗಿ, ಮಾಧವನು ಇದರ ಮರ್ಮವನ್ನು ತಿಳಿಯ

ಲೋಸುಗ ರಂಗಪಟ್ಟಣಕ್ಕೆ ಹೋಗಿಬಂದನು. ಬಳಿಕ ವಿನಯನು ಆದರದಿಂದ—ಮಹಾಶಯ ! ವರ್ತಮಾನವೇನು ? ಎಂದನು.

ಮಾಧವ—ಎಲ್ಲ ಗೋಪ್ಯವಾಗಿರುವುದು. ಪುರುಷೋತ್ತಮನಾದರೋ ಮಿತಿಮೀರಿ ರೇಗಿರುವನು. ಅದಕ್ಕಾಗಿ ನೂರಾರು ಜನರನ್ನು ಕೂಡಿಹಾಕಿಕೊಂಡು ದೇವಪುರದ ಪೋಲೀಸಿಗೂ ವರ್ತಮಾನ ಕೊಟ್ಟಿರುವನು.

ವಿನಯ—ಅನಂತರ ?

ಮಾಧವ—ನಾನು ಮತ್ತೆ ಕೇಳಿದ್ದಕ್ಕೆ, ಪುರುಷೋತ್ತಮನು ಹೇಳಿದ್ದೇನೆಂದರೆ—ನಾನು ಕಾರ್ಯಭಾರವನ್ನು ವಹಿಸಿರುವಾಗ ನೀವು ಯೋಚಿಸತಕ್ಕ ಕೆಲಸವಿಲ್ಲ. ಎಲ್ಲ ಸುಮುಖವಾಗಿ ಪರಿಣಮಿಸುವುದಕ್ಕೆ ತಕ್ಕ ಏರ್ಪಾಡು ನಡೆದಿರುವುದು. ತಡಮಾಡದೆ ಎಲ್ಲರೂ ದೇವಪುರಕ್ಕೆ ಬಂದುಬಿಡಬೇಕು.

ವಿನಯನು ಇದನ್ನು ಕೇಳಿ ಸುಮ್ಮನಾದನು. ಕೊಂಚಹೊತ್ತಿನೊಳಗಾಗಿ ಮೂವರೂ ಆನಂದವಾಡಿಯಿಂದ ದೇವಪುರಕ್ಕೆ ತೆರಳಿದರು.

---

## ಒಂಬತ್ತನೆಯ ಸಂಧಿ.

ಇಂದು ರಂಗಪಟ್ಟಣದ ದೊಡ್ಡ ಮಹಡಿಯ ಮನೆಯಲ್ಲಿ ಆನಂದಕ್ಕೆ ಪಾರವೇಯಿಲ್ಲ. ಇಂದು ಆ ಮನೆಯಲ್ಲಿ ರಾತ್ರಿಯಾದಮೇಲೆ ಬಂದು ವಿವಾಹವು ನಡೆಯುವುದು. ವರನಾದರೋ ಶ್ರೀಮಂತ ಕರಾಳರಾಯ ; ವಧುವು ಲೀಲಾವತಿ. ವಿವಾಹಕರ್ತನು ಸ್ವಯಂ ಉನ್ಮತ್ತರಾಘವ ಮಹಾಶಯ. ಬಂದು ವ್ಯಕ್ತಿ ಹೊರತಾಗಿ ಮಿಕ್ಕವರೆಲ್ಲರೂ ಆನಂದಸಾಗರದಲ್ಲಿ ಮಗ್ನರಾಗಿರುವರು. ಈ ಜನ್ಮದಲ್ಲಿ ತನಗೆ ವಿವಾಹವೆಂಬುದೂ ನಡೆಯುವುದೆಂದು ಕರಾಳನಿಗೆ ಮಹಾಸಂತೋಷ. ಏನಾದರೂ ಆಗಲಿ, ನಮ್ಮ ಹಠವು ನೆರವೇರಿತಲ್ಲ,

ಎಂದು ಉನ್ಮತ್ತನು ಪರಮಹರ್ಷಿತನಾಗಿರುವನು. ಮಿಕ್ಕವರು ಸಂತೋಷವಾಗಿರಲು ಅನೇಕಕಾರಣಗಳಿದ್ದುವು. ಇಂತಹ ಸಂತೋಷ ಮಧ್ಯದಲ್ಲಿ ಲೀಲಾವತಿಯೊಬ್ಬಳು ಮಾತ್ರ ಒಂದು ಕೋಣೆಯಲ್ಲಿ ಕುಳಿತು ಅಳುತ್ತಿದ್ದಳು. ಅವಳು ಅಳುವುದಾದರೆ ಅಳಲಿ, ಅದರಿಂದ ನಿಮಗೂ ನಮಗೂ ಏನು ? ಸಂಸಾರದಲ್ಲಿ ಎಷ್ಟೋ ಜನರು ತಮಗೆ ತೋರಿಬಂದಾಗಲೆಲ್ಲ ಪರಿಪರಿಯಾಗಿ ಅಳುವರು. ಎಲ್ಲರ ಅಳುವನ್ನೂ ನಾವು ನೋಡುವುದಕ್ಕೆ ಹೋದರೆ ಉಳಿಬಾಳಿಲ್ಲ. ಇಷ್ಟವಿದ್ದವ ರೆಲ್ಲರೂ ಅಳಲಿ. ಇತರರು ಅಳುವರೆಂದು ನಾವು ನಮ್ಮ ಕೆಲಸ ಗಳನ್ನು ಬಿಡುವುದಕ್ಕಾದೀತೆ? ಲೀಲಾವತಿಯ ಅಳು ಯಾರಿಗೆಬೇಕು. ಅವಳ ಇಷ್ಟಾನಿಷ್ಟಗಳನ್ನು ವಿಚಾರಿಸಿ ಕೆಲಸಮಾಡಬೇಕೆಂದು ಯಾರಿಗೆ ಅಗತ್ಯ ? ಸಂಸಾರದಲ್ಲಿ ಎಲ್ಲರ ಅಭಿಪ್ರಾಯಕ್ಕೂ ಸರಿಯಾಗಿ ಕೆಲಸವು ನಡೆಯುವುದೆಂದು ಯಾರುತಾನೇ ಹೇಳಬಲ್ಲರು ? ವಿಶೇಷ ವಾಗಿ ವಿವಾಹಕಾಲದಲ್ಲಿ ವಧುವಿನ ಇಷ್ಟಕ್ಕನುಸಾರವಾಗಿ ವಿವಾಹ ವನ್ನು ಯಾವ ತಂದೆತಾಯಿಗಳು ನೆರವೇರಿಸಿರುವರು ? ಕಾಲವು ಮೀರಿಮೀರಿ ಹೋಗುವುದೆಂದೋ, ಅನುರೂಪನಾದ ವರನು ತಮ್ಮ ಕುಲದಲ್ಲಿಯೇ ಸಿಕ್ಕುವುದಿಲ್ಲವೆಂದೋ, ಎಲ್ಲರೂ ಒಳ್ಳೆಯದನ್ನೇ ಬಯಸುವುದಾದರೆ ಅದು ಸಿಕ್ಕುವುದು ತಾನೆ ಎಲ್ಲಿಯೆಂದೋ, ಹುಡು ಗಿಯ ಹಣೆಯಲ್ಲಿ ಬರೆದಿರುವುದನ್ನು ತಪ್ಪಿಸಬಲ್ಲವರಾರೆಂದೋ, ಇನ್ನೂ ಏನೇನೋ ಕಾರಣಗಳಿಂದಲೋ, ತಾಯಿಯು ಮಗಳ ಅನು ಮತಿಯಿಲ್ಲದೆ ವಿವಾಹಮಾಡಿಬಿಡುವನು ತಂದೆಯಾದವನ ಇಂತಹ ಅತ್ಯಾಚಾರಗಳನ್ನು ಲೋಕವನ್ನರಿಯದ ಬಾಲೆಯು ಮರಣಾವಧಿ ಸಹಿಸಬೇಕು ; ಯತ್ನವಿಲ್ಲ.

ಉನ್ಮತ್ತನು ಆ ಮನೆಯ ಒಂದು ಕೋಣೆಯಲ್ಲಿ ನಾಲ್ಕಾರು ಜನರೊಡನೆ ಸರಸಸಲ್ಲಾಪಗಳನ್ನಾಡುತ್ತಿದ್ದನು. ಆ ಹೊತ್ತಿಗೆ ಸರಿ

ಯಾಗಿ ಬಾಗಿಲು ತೆರೆದು ನಿರಾಕಾರವಾದ ಒಂದು ದೊಡ್ಡ ಗುಂಡಿ ನಾತಿರುವ ಪದಾರ್ಥವು ಒಳಗೆ ಬರುವಂತೆ ಕಾಣಿಸಿತು ಅದೇನಿರ ಬಹುದೆಂದು ಎಲ್ಲರೂ ಅಚ್ಚರಿಯಿಂದ ನೋಡುತ್ತಿರುವಲ್ಲಿ, ಅದು ಒಂದು ದೊಡ್ಡ ಗುಡಾಣದಾತಿರುವ ಹೊಟ್ಟೆಯೆಂದು ಗೊತ್ತಾಯಿತು. ಆ ಹೊಟ್ಟೆಯು ಒಳಗೆಬಂದ ಎಷ್ಟೋಹೊತ್ತಿನ ಮೇಲೆ ಸಣ್ಣದಾದ ಕೈಕಾಲುಗಳು ಬಂದುವು. ಈ ವ್ಯಕ್ತಿಯು ಯಾರಿರಬಹುದೆಂದು ಎಲ್ಲರೂ ದೃಷ್ಟಿಸಿ ನೋಡಿದಮೇಲೆ, ಕರಾಳರಾಯನೆಂದು ಗೊತ್ತಾಗಿ ಆತನನ್ನು ಬಂದುಕಡೆ ಕುಳ್ಳಿರಿಸಿದರು. ಜನ್ಮದಲ್ಲಿ ಒಂದು ದಿನವೂ ನಗುವೆಂಬುದನ್ನೇ ಅರಿಯದ ಕರಾಳನು ಇಂದು ಕಿಲಕಿಲ ನಗುತ್ತಿರುವನು. ಇದನ್ನು ನೋಡಿ ಎಲ್ಲರೂ ಆನಂದಪಟ್ಟರು. ಆಗ ಮಿತ್ರನೊಬ್ಬನು ಉನ್ಮತ್ತನನ್ನು ನೋಡಿ—ಮಹಾಶಯ ! ಲಗ್ನವು ಎಷ್ಟು ಹೊತ್ತಿಗೆ ? ಎಂದನು.

ಉನ್ಮತ್ತ—ರಾತ್ರಿ ಒಂಬತ್ತುಗಂಟೆಯ ಮೇಲೆ ಯಾವಾಗ ಬೇಕಾದರೂ.

ಮಿತ್ರ—ಹೊತ್ತಾದಮೇಲೆ ಲಗ್ನವಾಗುವುದು ಒಳ್ಳೆಯದು.

ಕರಾಳ—ಅದೇತಕೆ ?

ಮಿತ್ರ—ನಾವೆಲ್ಲರೂ ವಿವಾಹಕ್ಕೆ ಮೊದಲು ವಿಶೇಷವಾಗಿ ವಿನೋದದಿಂದಿರಬಹುದು.

ಕರಾಳ—ನಿಮ್ಮ ಮಾತು ಕೇಳಿದರೆ ನನಗೆ ಭಯವಾಗುವುದು. ಮದುವೆಯ ಶಾಸ್ತ್ರವು ಬೇಗನೆ ಮುಗಿದುಹೋದಲ್ಲಿ. ಆಮೇಲೆ ಬೆಳಗಿನ ವರೆಗೂ ಬೇಕಾದಹಾಗೆ ಆನಂದದಿಂದಿರಬಹುದಲ್ಲ !

ಉನ್ಮತ್ತ—ಮಾವ ! ನೀನೇತಕೆ ಇಷ್ಟು ಹೆದರುವೆ? ನಾನಿರುವಾಗ ಮದುವೆಯು ನಡೆಯುವುದಿಲ್ಲವೆಂದರೇನು ?

ಕರಾಳ—ಅದಕ್ಕಲ್ಲ. ನೀನು ಇರುವಾಗ ನನಗೇನು ಭಯ

ಬಾವದ್ದು ? ಸಾಯಂಕಾಲವಾಯಿತು. ಮುಂದಿನ ಕೆಲಸಗಳೆಲ್ಲವೂ ಬೇಗಬೇಗ ನಡೆಯಬೇಕೆಂಬುದೇ ನನ್ನ ಉದ್ದೇಶ.

ಉನ್ಮತ್ತ—ಮಾವ ! ನಿನಗೆ ಭ್ರಾಂತಿಯೋ ? ಈಗಿನ್ನೂ ಮಟಮಟ ಮಧ್ಯಾಹ್ನವಲ್ಲವೇ ?

ಕರಾಳ—ಸಾಯಂಕಾಲವಾಗುವುದೆಷ್ಟುಹೊತ್ತು ? ಅದಕ್ಕಾಗಿ ನಿನಗೆ ಜ್ಞಾಪಿಸಿದ್ದು. ನನಗೇನೋ ಈಗ ಐದುಗಂಟೆಯಾದಂತಿದೆ.

ಉನ್ಮತ್ತ— (ಗಡಿಯಾರವನ್ನು ತೋರಿಸಿ) ಇನ್ನೂ ಎರಡು ಗಂಟೆ.

ಕರಾಳ—ಗಡಿಯಾರವು ನಿಂತುಹೋಗಿದೆಯೋ ಏನೋ ! ಗಡಿಯಾರಗಳನ್ನು ನಂಬಿದವರಾರು ? ಒಬ್ಬೊಬ್ಬನ ಗಡಿಯಾರದಲ್ಲಿ ಒಂದೊಂದು ಗಂಟೆ.

ಉನ್ಮತ್ತ—ಮಾವ ! ಮದುವೆಯೆಂದರೆ ಇಷ್ಟು ತತ್ತರ ಗುಟ್ಟುವೆಯೇತಕೆ ?

ಈರೀತಿಯಲ್ಲಿ ಎಲ್ಲರೂ ತಮತಮಗೆ ತೋರಿಬಂದಂತೆ ಮಾತ ನಾಡುತ್ತಾ ಕುಳಿತಿರುವಲ್ಲಿ ಸೂರ್ಯನು ಮುಳುಗಲಾರಂಭಿಸಿದನು. ಕರಾಳನ ನಿರ್ಬಂಧದಿಂದ ಒಂಬತ್ತು ಗಂಟೆಯಾದ ಕೂಡಲೆ ವಿವಾಹವು ನಡೆದುಹೋಗಬೇಕೆಂದು ನಿಶ್ಚಯವಾಯಿತು.

ವಿವಾಹ ಮಂಟಪವು ಮನೋಹರವಾಗಿ ಅಲಂಕರಿಸಲ್ಪಟ್ಟಿರು ವುದು. ಒಂದುಕಡೆ ಸಂಗೀತವು ಅತಿ ವಿಜೃಂಭಣೆಯಿಂದ ನಡೆಯು ತ್ತಿರುವುದು. ಬಂದಿದ್ದವರೆಲ್ಲರೂ ಸಂಗೀತದಲ್ಲಿ ಮಗ್ನರಾಗಿ ಹೋಗಿ ದ್ದರು. ಒಂದುಕಡೆ ವಧೂವರರಿಗೆ ಹಸೆಯ ಮಣೆಯನ್ನು ಇಟ್ಟಿರು ವರು ; ಅದರ ಪಕ್ಕಗಳಲ್ಲಿ ದೀಪಸ್ತಂಭಗಳು ಉರಿಯುತ್ತಿರುವುವು. ಜನರೆಲ್ಲರೂ ವಿವಾಹಸಂಭ್ರಮವನ್ನು ನೋಡುವುದಕ್ಕಾಗಿ ನೆರೆದಿ ದ್ದರು.

ಈ ಮಹಾನಂದ ಮಧ್ಯದಲ್ಲಿ ಘೋರತರವಾದ ವಿಷಾದವಿದ್ದಿತು. ಎಲ್ಲರ ಹೃದಯದಲ್ಲಿಯೂ ಸಂತೋಷವು ತುಂಬಿರುವಾಗ, ಒಂದು ಹೃದಯದಲ್ಲಿ ಮಾತ್ರ ದುಃಖ. ಆನಂದಸಾಗರವು ಘೋರ್ಗರೆಯುತ್ತಿರುವಲ್ಲಿ, ಒಂದುಕಡೆ ಕಂಬನಿಗಳ ಪ್ರವಾಹವು ಸಮುದ್ರದಲ್ಲಿ ಸೇರಿ ಹೋಗುತ್ತಿದ್ದಿತು. ಮನೆಯ ಹಿಂಭಾಗದ ಒಂದು ದೊಡ್ಡ ಕೋಣೆಯಲ್ಲಿ ಲೀಲಾವತಿಯು ಕುಳಿತುಕೊಂಡು ಅತ್ತು ಅಳುವಳು. ಅವಳ ಪಕ್ಕದಲ್ಲಿ ಮತ್ತಾರೂ ಇಲ್ಲ. ಅವಳ ಜತೆಯಲ್ಲಿ ನಿತ್ಯವೂ ಯಾರಾದರೂ ಇದ್ದೇ ಇರುತ್ತಿದ್ದರು; ಈದಿನ ಅವಳು ತನ್ನ ಕೌಶಲದಿಂದ ಎಲ್ಲರನ್ನೂ ದೂರಕಳುಹಿಸಿ ಏಕಾಕಿನಿಯಾಗಿರುವಳು. ಇಂದು ಅವಳ ದೇಹದಲ್ಲಿ ಆ ರೂಪವಿಲ್ಲ; ಆ ಕಾಂತಿಯಿಲ್ಲ. ಒಂದು ವಾರದೊಳಗಾಗಿ ಎಂತಹ ಪರಿವರ್ತನೆ!

ಅನಂತಪುರನೆಲ್ಲಿ? ತಾಯಿಯೆಲ್ಲಿ? ವಿನಯನೆಲ್ಲಿ? ಲೀಲಾವತಿ ತಾನೇ ಎಲ್ಲಿ? ಈ ದಿನ ಅವಳಿಗೆ ವಿವಾಹವಂತೆ. ಇದೇನು ಸರ್ವನಾಶ! ವಂಚನೆಮಾಡಿ ಬಲಾತ್ಕಾರಮಾಡಿ, ಶತ್ರುಗಳು ಇತರರ ಕನ್ಯೆಯನ್ನು ಕರೆದುತಂದು ಎರಡು ಗಂಟೆಗಳೊಳಗಾಗಿ ವಿವಾಹಮಾಡುವುದರಲ್ಲಿರುವರು. ವಿವಾಹವಾದರೋ ರೂಪಾನುರೂಪನಾದ ವರನೊಡನೆಯೋ? ಅಲ್ಲ; ಎಂದಿಗೂ ಅಲ್ಲ.

ಲೀಲಾವತಿಯು ಅಳದೇ ಮತ್ತೇನು ಮಾಡಾಳು? ಅವಳ ಜಡೆ ಹಾಕದ ಕೇಶರಾಶಿಯು ಮಣ್ಣಿನಮೇಲೆ ಬಿದ್ದು ಒದ್ದಾಡುತ್ತಿರುವುದು. ಆ ಕೋಣೆಯಲ್ಲಿ ಮಲಗುವುದಕ್ಕೆ ಒಂದು ಪಟ್ಟೆಯ ಮಂಚವಿದ್ದರೂ ಲೀಲೆಯು ನೆಲದಮೇಲೆಯೇ ಬಿದ್ದಿರುವಳು. ಕಣ್ಣುಗಳು ಕೆಂಪಾಗಿರುವುವು, ದೇಹವು ಕಾಂತಿಹೀನವಾಗಿರುವುದು, ಕೇಶವು ಭಯಂಕರವಾಗಿರುವುದು, ಸೀರೆಯು ಮಲಿನವಾಗಿರುವುದು. ಲೀಲೆಯು ನಿರಾಭರಣಳಾಗಿರುವಳು. ಈ ಲೀಲೆಯು ಮೊದಲಿನ ಲೀಲೆಯಲ್ಲ.

ಇಂತಹ ಲೀಲೆಯು ಬಹಳ ಹೊತ್ತು ಈ ದುರವಸ್ಥೆಯಲ್ಲಿದ್ದು ಬಾವು ದೀರ್ಘವಾದ ನಿಟ್ಟುಸಿರನ್ನು ಬಿಟ್ಟು ತನ್ನಲ್ಲಿತಾನೇ ಮಾತನಾಡಿದಳು:- ನಾನು ಬದುಕಿ ಫಲವೇನು? ಯಾವ ಜೀವನದಲ್ಲಿ ಸುಖವಿಲ್ಲವೋ, ಅದನ್ನು ಇಟ್ಟುಕೊಂಡು ಪ್ರಯೋಜನವೇನು? ನನ್ನ ದೇಹವು ಯಾರ ಸ್ವತ್ತೋ, ಅವರ ಚರಣದಲ್ಲಿ ಇದನ್ನು ಸಮರ್ಪಣವಾಗ ದಿದ್ದರೆ, ಈ ಭಾರವನ್ನು ನಾನು ಹೊತ್ತು ಪ್ರಯೋಜನವೇನು? ಇಲ್ಲ; ಈ ಸುಟ್ಟದೇಹವನ್ನು ನಾನೆಂದಿಗೂ ಇಟ್ಟುಕೊಳ್ಳುವುದಿಲ್ಲ.

ಲೀಲಾವತಿಯು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಕ್ಕಾಗಿ ಸಂಕಲ್ಪಮಾಡಿಕೊಂಡು ಅಲ್ಲಿಂದೆದ್ದಳು. ಸುತ್ತಲೂ ನೋಡಿದಳು. ಮರಣಸಾಧಕವಾದ ಯಾವವಸ್ತುವೂ ಅಲ್ಲಿಲ್ಲದಿರಲು, ಕೊಂಚಹೊತ್ತು ಮಂಚದಕಡೆ ರಪ್ಪೆಹಾಕದೆ ನೋಡಿದಳು. ಮಂಚಕ್ಕೆ ಬಿಗಿದಿದ್ದ ನವಾರು ಕಾಣಿಸಿತು. ಲೀಲೆಯು ಸಡಗರದಿಂದ ನವಾರನ್ನು ಬಿಚ್ಚಿ ಒಂದು ಕೊನೆಯನ್ನು ಎತ್ತರವಾದ ಸ್ಥಳಕ್ಕೆ ಕಟ್ಟಿ ಮತ್ತೊಂದು ಕಡೆ ಕುಣಿಕೆಯನ್ನು ಏರ್ಪಡಿಸಿದಳು. ಬಳಿಕ ಲೀಲೆಯು ಸುತ್ತಲೂ ನೋಡಿದಳು. ಆಕೆಯ ಕಣ್ಣುಗಳಿಂದ ಒಂದೆರಡು ತೊಟ್ಟು ನೀರು ಉರುಳಿತು. ಲೀಲೆಯು ಕೊನೆಯ ಸಲ ಮಾತನಾಡಿದಳು:—

ವಿನಯ, ಪ್ರಿಯತಮ, ಪ್ರಾಣನಾಥ, ಹೃದಯವಲ್ಲಭ! ಈ ಜನ್ಮದಲ್ಲಿ ನಿನ್ನನ್ನು ನಾನು ಮತ್ತೆ ನೋಡಲಾರೆನು. ನಿನ್ನನ್ನು ಕಣ್ಣು ತುಂಬ ನೋಡಬೇಕೆಂದು ನನಗೆ ಬಹಳ ಆಶೆ. ಆದರೆ ನಾನು ಬದು ಕುವುದಕ್ಕಿಲ್ಲ. ನನ್ನ ದುರವಸ್ಥೆಯು ನಿನಗೆ ಗೊತ್ತಿದ್ದಿದ್ದರೆ, ನನಗೆ ಈ ಕಷ್ಟವು ಉಂಟಾಗುತ್ತಿರಲಿಲ್ಲ. ನನಗೆ ಪರಮಸಂತೋಷ ವೇನೆಂದರೆ—ಪರಪುರುಷನು ನನ್ನನ್ನು ವರಿಸುವುದಕ್ಕೆ ಮುಂಚೆಯೇ ನಾನು ನಿನ್ನವಳಾಗಿ ಸಾಯುವೆನು. ಜೀವಿತೇಶ! ಪರಲೋಕ

ವಲ್ಲಿಯಾದರೂ ನೀನು ದರ್ಶನವನ್ನು ಕೊಡು. ಈಗ ನಾನು ಆತ್ಮ ಹತ್ಯೆಗೆ ಸಿದ್ಧಳಾಗಿರುವೆನು.

ಹೀಗೆಹೇಳಿ ಲೀಲಾವತಿಯು ಮಂಚದಮೇಲೆ ಹತ್ತಿ ನವಾರಿನ ಕುಣಿಕೆಯೊಳಗೆ ತಲೆಯನ್ನು ಹಾಕಿ ಧುಮ್ಮಿಕ್ಕಿದಳು. ಅಷ್ಟು ಹೊತ್ತಿಗೆ ಸರಿಯಾಗಿ ಆ ಕೋಣೆಯ ಬಾಗಿಲು ದಢೀರೆಂದು ತೆರೆಯಲ್ಪಟ್ಟಿತು. ಕ್ಷಣಮಾತ್ರದಲ್ಲಿಯೇ ವಿನಯನು ನವಾರನ್ನು ಕತ್ತರಿಸಿ ಲೀಲಾವತಿಯನ್ನು ಹಿಡಿದಿದ್ದನು. ಲೀಲಾವತಿಯ ಈ ದಾರುಣವಾದ ದುರವಸ್ಥೆಯನ್ನು ಕಣ್ಣಾರ ನೋಡಿ, ವಿನಯನು ಮೂರ್ಛೆಹೋಗಿ ಕೆಳಗೆ ಬಿದ್ದನು; ಅವನೊಡನೆಯೇ ಲೀಲಾವತಿಯೂ ಬಿದ್ದುಬಿಟ್ಟಳು.



## ಹತ್ತನೆಯ ಸಂಧಿ.

ಸಂಧ್ಯಾಕಾಲದಲ್ಲಿ ಸರಳಕುಮಾರಿಯು ತನ್ನ ಕೋಣೆಯಲ್ಲಿ ಕುಳಿತಿರುವಳು. ಅವಳ ಸರ್ವಾಂಗದಲ್ಲಿ ದಾರುಣವಾದ ವಿಷಾದ ರೇಖೆಯು ಕಾಣ್ಬರುತಿದ್ದಿತು. ಆಕೆಯ ಪಕ್ಕದಲ್ಲಿ ಸರಳೆಯ ಸ್ನೇಹಿತಳಾದ ಪದ್ಮಾವತಿಯು ಕುಳಿತುಕೊಂಡಿದ್ದಳು.

ಸರಳಕುಮಾರಿಯು ಅಳುತ್ತಿರುವಳು ; ಪದ್ಮಾವತಿಯು ಸಮಾಧಾನ ಮಾಡುತ್ತಿರುವಳು. ಪದ್ಮಾವತಿಯು ಸಮಾಧಾನ ಮಾಡಿದ ಹಾಗೆಲ್ಲ ಸರಳಕುಮಾರಿಯು ಮತ್ತಷ್ಟು ಅಳುವಳು. ಈ ಅನರ್ಥಕ್ಕೆ ನಮ್ಮ ಕಥೆಯ ಪ್ರತಿನಾಯಕನಾದ ಉನ್ಮತ್ತರಾಘವನೇ ಕಾರಣನು. ಊರು ಕೇರಿಗಳಲ್ಲಿ ಯಾರ ಬಾಯಲ್ಲಿ ನೋಡಿದರೂ ಉನ್ಮತ್ತನ ವಿಷಯವೇ ಆಗಿರುವುದು. ಗ್ರಾಮವಾಸಿಗಳಲ್ಲಿ ಯಾರಿಗೂ ವೀರನಾರಾಯಣನಲ್ಲಾಗಲಿ, ಅವನಮಗ ಉನ್ಮತ್ತನಲ್ಲಾಗಲಿ ಗೌರವವೇ ಇಲ್ಲ. ಗ್ರಾಮದ ಯಜಮಾನನೆಂಬ ಭಯಕ್ಕಾಗಿ ಎಲ್ಲರೂ ಸುಮ್ಮನಿರಬೇಕಾಗಿದ್ದಿತು. ಜನಗಳಾವರೋ ತಾದೆಮಕ್ಕಳ

ಅತ್ಯಾಚಾರಗಳನ್ನು ಕುರಿತು ಗುಸಗುಸ ಪಿಸಪಿಸ ಮಾತನಾಡಿಕೊಳ್ಳು ತಿದ್ದರು. ಜನರ ಬಾಯನ್ನು ಕಟ್ಟುವರಾರು !

ಉನ್ಮತ್ತನು ಲೀಲಾವತಿಯನ್ನು ಅಪಹರಿಸಿ ರಂಗಪಟ್ಟಣದಲ್ಲಿ ಟ್ಟಿದ್ದನು. ನಿತ್ಯವೂ ಅನುಸಂಧಾನದಲ್ಲಿದ್ದ ವಿರೋಧಿಗಳಿಗೆ ಇದು ಗೊತ್ತಾಗದೇ ಇರಲಿಲ್ಲ. ಅನಂತರಾಮನ ಅಳಿಯ ಮತ್ತು ಮಗ ಇವರಿಬ್ಬರೂ ಸಾಹಸಮಾಡಿ ಪೋಲೀಸ್ ಅಧಿಕಾರಿಗಳ ಮೂಲಕ ದುಷ್ಟರನ್ನು ಹಿಡಿಸಿದರು. ಈಗ ದುಷ್ಟರೆಲ್ಲರೂ ಪೋಲೀಸ್ ಠಾಣೆಯಲ್ಲಿರುವರು. ಈ ವರ್ತಮಾನವು ಎಲ್ಲೆಲ್ಲಿಯೂ ಸಹಸ್ರ ಮುಖವಾಗಿ ಹಬ್ಬಿತು. ಅನಂತರಾಮನು ತನ್ನ ಮನೆಯು ಸುಟ್ಟು ಹೋದಂದಿನಿಂದಲೂ ಸಪರಿವಾರನಾಗಿ ದೇವಪುರದಲ್ಲಿ ತನ್ನ ಅಳಿಯ ನಾದ ಜನಾರ್ದನನ ಮನೆಗೆ ಬಂದುಬಿಟ್ಟನು.

ಉನ್ಮತ್ತನು ತನ್ನ ಕಾರ್ಯವು ನೆರವೇರುವುದಕ್ಕಾಗಿ ವಿನಯ ನನ್ನು ಕೊಲ್ಲಿಸುವುದಕ್ಕೆ ಯತ್ನಮಾಡಿದನು ; ಆದರೆ ಅದು ಫಲಿಸಲಿಲ್ಲ. ಆಯುಶ್ಶೇಷದಿಂದ ವಿನಯನು ಮತ್ತೆ ಬದುಕಿದುದೇ ಅದಕ್ಕೆ ಕಾರಣ. ಉನ್ಮತ್ತನು ತನ್ನ ಅತ್ಯಾಚಾರಕ್ಕಾಗಿ ಹನ್ನೆರಡುವರ್ಷಕ್ಕೆ ಕಡಮೆ ಯಿಲ್ಲದೆ ಕಾರಾಗೃಹವಾಸವನ್ನು ಅನುಭವಿಸುವನೆಂದು ಜನರು ವಿಧ ವಿಧವಾಗಿ ಮಾತನಾಡಿಕೊಂಡರು. ಇದನ್ನು ವೀರನಾರಾಯಣನು ಕೇಳಿ. ತನಗಿದ್ದ ಒಬ್ಬ ಮಗನಿಗೂ ಈ ದುರವಸ್ಥೆಯು ಬಂದಿತಲ್ಲಾ ಎಂದು ಬಹಳವಾಗಿ ವ್ಯಸನಪಟ್ಟು,ಉನ್ಮತ್ತನ ಉದ್ಧಾರಕ್ಕಾಗಿ ಸಾಧ್ಯ ವಾದುದನ್ನೆಲ್ಲ ಮಾಡಿದನು. ಸಲಹೆಗಳನ್ನು ಕೊಟ್ಟವರೆಲ್ಲರಿಗೂ ಬೇಕಾದಹಾಗೆ ಮರ್ಯಾದೆ ಮಾಡಿದನು. ಮನೆಯಲ್ಲಿ ಪುರೋಹಿತನು ಇಂದ್ರಾಕ್ಷಿಯನ್ನೂ ಸಂಕಷ್ಟನಾಶನ ಸ್ತೋತ್ರವನ್ನೂ ಪಾರಾಯಣ ಮಾಡುವನು. ಮನೆಯ ದೇವರ ಪೂಜೆಯ ಬ್ರಾಹ್ಮಣನು ಬೆಳಗಾ ದರೆ ದೇವರಿಗೆ ಸಹಸ್ರನಾಮಗಳಿಂದ ತುಲಸಿಯ ಅರ್ಚನೆಯನ್ನು

ಮಾಡುವನು. ವೀರನಾರಾಯಣನ ಪಙ್ತಿಯಲ್ಲಿ ಎರಡುಹೊತ್ತೂ ಬ್ರಾಹ್ಮಣರು ಮೃಷ್ಟಾನ್ನಭೋಜನವನ್ನು ಮಾಡುವರು. ಪಾಪಿಷರ ಪೇಶಿಗಳೂ, ಕುಂಟರು ಕುರುಡರೂ ಆದಿಯಾಗಿ ಎಲ್ಲರೂ ಎಂದೂ ಕಾಣದ ವೀರನಾರಾಯಣನ ಔದಾರ್ಯವನ್ನು ಕೊಂಡಾಡಲಾರಂಭಿಸಿರುವರು. ದೇವಸ್ಥಾನಗಳಲ್ಲಿ ಧೂಪದೀಪನೈವೇದ್ಯಾದಿ ಕ್ರಿಯಾಕಲಾಪಗಳಿಗೆ ಬಿಡುವಿಲ್ಲ. ದೇವರ ಸನ್ನಿಧಿಯಲ್ಲಿ ಬ್ರಾಹ್ಮಣರು ಮಂತ್ರಗಳನ್ನು ಹೇಳದ್ದೂ ಹೇಳದ್ದೆ ; ಆದರೆ ಉದ್ದೇಶವೇನೋ ಅದು ಮಾತ್ರಯಾರಿಗೂ ತಿಳಿಯದು.

ಗ್ರಾಮದಲ್ಲಿ ಈ ಸಮಾರಂಭವು ನಡೆಯುತ್ತಿರುವಾಗ, ವೀರನಾರಾಯಣನು ತನ್ನ ಮಗನ ಮಂಗಳಕ್ಕಾಗಿ ಅರ್ಥಶ್ರಾದ್ಧದಲ್ಲಿ ದೀಕ್ಷಿತನಾದನು. ಕೆಲಸಗಾರರಿಗೆ ಲಂಚ, ಕೆಲಸಕ್ಕಾಗಿ ಸುತ್ತತಕ್ಕವರಿಗೆ ದ್ವಿಗುಣವಾದ ಬಾಡಿಗೆ, ಸಹಕಾರಿ ವಕೀಲರಿಗೆ ತಗಲುವ ಖರ್ಚು, ಬ್ಯಾರಿಷ್ಟರಿಗೆ ಫೀ, ಇತರರಿಗೆ ಇನಾಮು ಕಂಡಕಂಡವರಿಗೆಲ್ಲ ಕೈಬೆಚ್ಚಗೆ ಮಾಡುವುದು, ಇತ್ಯಾದಿಗಳಿಂದ ಹಣದ ರಾಶಿಯು ಧೂಳಿಯಂತೆ ಮಾಯವಾಗಲಾರಂಭಿಸಿತು. ಇಷ್ಟಾದರೂ ನ್ಯಾಯಾಧಿಪತಿಯು ಉನ್ಮತ್ತನನ್ನು ಜಾಮೀನಿನ ಮೇಲೆ ಬಿಡಲು ಇಷ್ಟಪಡಲಿಲ್ಲ. ಮಗನ ಉದ್ಧಾರದಲ್ಲಿ ವೀರನಾರಾಯಣನು ತೋರಿಸಿದ ಸಾಹಸವನ್ನು ಈ ಸಣ್ಣ ಪುಸ್ತಕದಲ್ಲಿ ವರ್ಣನೆಮಾಡಲು ಸಾಧ್ಯವಲ್ಲ.

ಸರಳಕುಮಾರಿಯು ಸಂಧ್ಯಾಕಾಲದಲ್ಲಿ ತನ್ನ ಕೋಣೆಯಲ್ಲಿ ಕುಳಿತು ತನ್ನ ಗಂಡನಿಗೆ ಈ ರೀತಿಯಾಗಿ ವಿಪತ್ತುಂಟಾಗಿರುವುದನ್ನು ಕೇಳಿ ಕೊರಗಲಾರಂಭಿಸಿದಳು. ಗಂಡನು ಎಷ್ಟೇಕೆಟ್ಟವನಾದರೂ ಪತಿವ್ರತೆಯಾದ ಹೆಂಗಸಿಗೆ ಪರದೈವವು. ಸಾಧ್ವಿಯು ಗಂಡನಿಗೆ ಎಂದೂ ಕೆಟ್ಟದ್ದನ್ನು ಬಯಸುವುದಿಲ್ಲ. ಸರಳಕುಮಾರಿಯು ತನ್ನ ಗಂಡನ ವಿಷಯವಾಗಿ ವ್ಯಸನಪಟ್ಟು ಕಂಬನಿಯನ್ನು ಸುರಿಸುತ್ತಿರಲು,

ಪದ್ಮಾವತಿಯು ನೋಡಿ—ಸರಳೆ! ನೀನು ಹೀಗೆ ಸಲವಿಲ್ಲದೆ ಕೊರಗಿ ಕೊರಗಿ ಸತ್ತರೆ ಪ್ರಯೋಜನವೇನು ? ಅನ್ನಪಾನಾದಿಗಳನ್ನು ತ್ಯಾಗ ಮಾಡಿದರೆ ಪ್ರಾಣವು ಉಳಿಯುವುದೇ? ಹಠಮಾಡದೆ ಊಟಮಾಡು. ಬಂದಿದ್ದೆಲ್ಲವನ್ನೂ ನಾವು ಅನುಭವಿಸಿಯೇ ತೀರಬೇಕು, ಎಂದಳು.

ಸರಳೆ—ಸಖಿ,ನಾನು ಸುಟ್ಟ ಮೋರೆಯವಳು. ನಾನು ಮಹಾ ಪಾಪಿಷ್ಠೆ, ನನಗಿಂತಲೂ ನಿರ್ಭಾಗ್ಯಳು ಈ ಲೋಕದಲ್ಲಿ ಮತ್ತಾರುಂಟು ?

ಪದ್ಮಾ—ಹಾಗಂದರೇನು ? ನೀನು ಆವುದರಲ್ಲಿ ಕಡಮೆ.

ಸರಳೆ—ನನ್ನ ಮೋರೆಯನ್ನು ಸುಟ್ಟರು. ನನ್ನ ಸ್ವಾಮಿಯು ಈಗ ಎಷ್ಟು ಸಂಕಟ ಪಡುತ್ತಿರುವರೋ ? ನಾನು ಅವರ ಹೆಂಡತಿಯಾಗಿ ಅವರ ಸಂಕಟವನ್ನು ಹೋಗಲಾಡಿಸುವುದಕ್ಕೆ ಯತ್ನವಿಲ್ಲದವಳಾಗಿ ಇಲ್ಲಿರಬೇಕಾಗಿ. ನಾನು ಬದುಕ್ಕಿರುವದಕ್ಕಿಂತಲೂ ಸಾಯುವುದು ಮೇಲು.

ಪದ್ಮಾ—ಈ ಸಂದರ್ಭದಲ್ಲಿ ನೀನು ನಿನ್ನ ಗಂಡನಿಗೆ ಯಾವ ಉಪಕಾರವನ್ನೂ ಮಾಡಲಾರೆ. ಸುಮ್ಮನೆ ಯೋಚಿಸಿ ಪ್ರಯೋಜನ ?

ಸರಳೆ—ಪದ್ಮಾ ! ಹೆಂಡತಿಯಾದವಳು ಗಂಡನಿಗೆ ಸಮಯಕ್ಕಾಗದ ಮೇಲೆ, ಆಕೆಯು ಇದ್ದೇನು, ಇಲ್ಲದಿದ್ದರೇನು ?

ಪದ್ಮಾ—ನೀನು ವ್ಯಸನಪಡಲು ಕಾರಣವೇನು ? ನಿನ್ನ ಮಾವಂದಿರಿರುವರು. ಅವರು ಮಗನ ಉದ್ಧಾರದಲ್ಲಿ ಎಷ್ಟೋ ಯತ್ನ ಮಾಡುತ್ತಿರುವರು. ಇದರಿಂದ ನಿನ್ನ ಗಂಡನಿಗೆ ಉದ್ಧಾರವಾಗದೇ ಏನು ? ಇದಕ್ಕಾಗಿ ನೀನು ಇಷ್ಟುಕೊರಗಿ ಸಂಕಟಪಡಬೇಕೆ ?

ಸರಳಕುಮಾರಿಯು ಈ ಮಾತನ್ನು ಕೇಳಿ ತನ್ನ ಇಷ್ಟದೇವತೆಯನ್ನು ಪ್ರಾರ್ಥಿಸಿದಳು—ಜಗದಂಬ, ನನ್ನ ಪತಿಯನ್ನು ಈ

ಘೋರವಾದ ವಿಪತ್ತಿನಿಂದ ಉದ್ಧಾರವಮಾಡಿ ನನಗೆ ಪತಿಭಿಕ್ಷೆಯನ್ನು ಕೊಡು. ನನ್ನ ಸ್ವಾಮಿಯು ಸಹವಾಸದೋಷದಿಂದ ಕೆಟ್ಟಕೆಲಸವನ್ನೂ ಮಾಡಿರಬಹುದು, ಅದನ್ನು ನೀನು ಕ್ಷಮಿಸು. ನಾನು ಅವರ ಕಷ್ಟವನ್ನು ಕೇಳಿ ಸಹಿಸಲಾರೆ. ನಾನು ಅವರಿಗಾಗಿ ಈ ಪ್ರಾಣವನ್ನು ಧರಿಸಿರುವೆನು. ತಾಯೆ! ನನ್ನ ಕಷ್ಟವನ್ನಾದರೂ ನೋಡಿ ಅವರ ದುಃಖವನ್ನು ನಿವಾರಣೆಮಾಡು.

ಸರಳಕುಮಾರಿಯು ಈರೀತಿಯಾಗಿ ಪ್ರಾರ್ಥಿಸುತ್ತಿರುವಲ್ಲಿ ಹೊರಗಡೆ ಕಠೋರವಾದ ಧ್ವನಿಯು ಕೇಳಿಬಂದಿತು. ಪದ್ಮಾವತಿಯು ಕೂಡಲೆ ಎದ್ದು ಹೊರಟುಹೋದಳು. ಸರಳಕುಮಾರಿಯು ಆ ಧ್ವನಿಯು ತನ್ನ ಸ್ವಾಮಿಯದೆಂದು ತಿಳಿದು ಬಹಳ ಸಂತೋಷದಿಂದ ಆತನಿದ್ದಲ್ಲಿಗೆ ಓಡಿ ಹೋಗುವುದರಲ್ಲಿದ್ದಳು. ಅಷ್ಟಾಗುವದರೊಳಗಾಗಿ, ಉನ್ಮತ್ತರಾಘವನು ವೀರಾವೇಶದಿಂದ ಚೀತ್ಕಾರಮಾಡುತ್ತಾ ಸರಳಕುಮಾರಿಯ ಕೋಣೆಯೊಳಗೆ ಬಂದು,ತನ್ನ ಹೆಂಡತಿಯ ತಲೆಯ ಕೂದಲನ್ನು ಹಿಡಿದು ಆಕೆಯನ್ನು ದರದರ ಕೋಣೆಯೊಳಗೆ ಎಳೆದುಕೊಂಡುಬಂದನು. ಬಳಿಕ ಆತನು ಸರಳೆಯನ್ನು ಕುರಿತು—ರಂಡೆ! ವಿನಯನಿಗೆ ಹೆಸರಿಲ್ಲದ ಕಾಗದವನ್ನು ಬರೆದವರಾರು? ಎಂದರಚಿದನು.

ಸರಳೆಯು, ಜೀವಿತೇಶ! ಇದೇನು ನೀವು ಮಾಡುವುದು? ಎಂದು ಕೇಳುವಲ್ಲಿ, ಉನ್ಮತ್ತನು ಹಲ್ಲುಗಳನ್ನು ಕಟಕುಟ ಕಡಿಯುತ್ತಾ ಸರಳೆಯ ಬೆನ್ನಿನಮೇಲೆ ದೊಣ್ಣೆಯಿಂದ ಹತ್ತಾರುಪೆಟ್ಟನ್ನು ಬಲವಾಗಿ ಹಾಕಿದನು. ಸರಳೆಯು ಈ ಯಾತನೆಯನ್ನು ತಡೆಯಲಾರದೆ—ಸ್ವಾಮಿನ್! ನಾನು ಅಪರಾಧಮಾಡಿದೆನು, ಕ್ಷಮಿಸಬೇಕು. ತಾವು ಕೊಂಚಹೊತ್ತು ವಿಶ್ರಮಿಸಿಕೊಂಡು ಬಳಿಕ ಏನು ಬೇಕಾದರೂ ಮಾಡಬಹುದು ಎಂದು ಅಂಗಲಾಚಿಕೊಂಡಳು. ಉನ್ಮತ್ತನು ಕ್ಷೋತ್ತಿನಮಗಳೆ! ನಿನ್ನನ್ನು ನಾನು ಕ್ಷಮಿಸಬೇಕೋ? ನಿನ್ನನ್ನು,

ಈಗಲೇ ಯಮಪಟ್ಟಣಕ್ಕೆ ಕಳುಹಿಸಿದೇ ಬಿಡೆನು ಎಂದು ಹೇಳುತ್ತಾ ಸರಳೆಯ ಪಕ್ಕಗಳಲ್ಲಿ ಬಲವಾಗಿ ಒದ್ದನು. ಅದರಿಂದಲೂ ಅವನಿಗೆ ತೃಪ್ತಿಯಾಗದೆ ಆಕೆಯ ತಲೆಯು ಒಡೆದುಹೋಗುವಂತೆ ದೊಣ್ಣೆಯಿಂದ ನಾಲ್ಕಾರುಪೆಟ್ಟನ್ನು ಹೊಡೆದನು. ಕ್ಷಣಮಾತ್ರದಲ್ಲಿಯೇ ರಕ್ತವು ಮನೆಯೆಲ್ಲಾ ವ್ಯಾಪಿಸಿತು. ಸರಳಕುಮಾರಿಯು ಈ ಯಾತನೆಯನ್ನು ತಡೆಯಲಾರದೆ—ಪ್ರಾಣೇಶ್ವರ ! ಕ್ಷಮಿಸು, ಕ್ಷಮಿಸು, ಎಂದು ಹೇಳುತ್ತಾ ಜ್ಞಾನವಿಲ್ಲದವಳಾಗಿ ನೆಲದಮೇಲೆ ಬಿದ್ದುಬಿಟ್ಟಳು. ಪಾಪಿಷ್ಠನಾದ ಪಶುಸ್ವಭಾವವುಳ್ಳ ಉನ್ಮತ್ತನು ಇದಕ್ಕೆ ಭಯಪಡದೆ ಪುನಃ ಹೆಂಡತಿಯನ್ನು ಕಾಲುಗಳಿಂದ ಒದೆದು ಒದೆದು ನಜ್ಜುಗುಜ್ಜು ಮಾಡಿಬಿಟ್ಟನು. ಅಷ್ಟುಹೊತ್ತಿಗೆ ಅಸಹಾಯಳಾದ ಸರಳಕುಮಾರಿಗೆ ಮೇಲುಸಿರಾಡಲಾರಂಭವಾಯಿತು. ಆಕೆಯ ತೆರದ ಕಣ್ಣುಗಳು ತೆರದಂತೆಯೇ ಇದ್ದುಬಿಟ್ಟವು; ಹಲ್ಲುಗಳು ಒಂದಕ್ಕೊಂದು ಸೇರಿದವು. ಬಾಯಿಂದ ರಕ್ತವು ಹೊರಗೆ ಬಂದುಬಿಟ್ಟಿತು.

ಮನೆಯ ದಾಸಿಯೊಬ್ಬಳು ಉನ್ಮತ್ತನ ಪಿಶಾಚವೃತ್ತಿಯನ್ನು ನೋಡಿ ಮನೆಯು ಕಿತ್ತುಹೋಗುವಂತೆ ಅರಚಿದಳು. ಅಕ್ಕಪಕ್ಕದವರೆಲ್ಲರೂ ಮನೆಯೊಳಗೆ ನುಗ್ಗಿದರು. ಉನ್ಮತ್ತನು ಪ್ರಳಯಕಾಲದ ರುದ್ರನಂತೆ ಭಯಂಕರವಾದ ಮೂರ್ತಿಯನ್ನು ತಾಳಿ ಹೆಂಡತಿಯನ್ನು ಸಂಹರಿಸುತ್ತಿದ್ದನು. ಜನರೆಲ್ಲರೂ ವಿಶ್ವಪ್ರಯತ್ನಮಾಡಿ ಉನ್ಮತ್ತನನ್ನು ಬೇರೊಂದು ಸ್ಥಳಕ್ಕೆ ಸಾಗಿಸಿ, ಸರಳಕುಮಾರಿಯ ಶುಶ್ರೂಷೆಗೆ ವೈದ್ಯರನ್ನು ಕರೆಯಿಸಿದರು. ಸರಳಕುಮಾರಿಯು ಬದುಕುವ ಸಂಭವವಿರಲಿಲ್ಲ.

ವೀರನಾರಾಯಣನು ಅತಿ ಪ್ರಯಾಸಪಟ್ಟು ತನ್ನ ಮಗನನ್ನು ಜಾಮೀನಿನ ಮೇಲೆ ಬಿಡಿಸಿಕೊಂಡು ಬಂದಿದ್ದನು. ಆತನು ತನ್ನ ಸಾಹಸವನ್ನು ಸ್ನೇಹಿತರಿಗೆ ತಿಳಿಸುತ್ತಾ ಮನೆಯ ಜಗಲಿಯಮೇಲೆ

ಕುಳಿತು, ತಾಂಬೂಲವನ್ನು ಸೇವಿಸುತ್ತಿದ್ದನು. ಈ ಸಮಯದಲ್ಲಿ ದಾಸಿಯ ವಿಕಟಸ್ವರವು ಕೇಳಿಸಲು, ಆತನು ಮನೆಯೊಳಗೆ ಹೋಗಿ ನೋಡಿದನು. ವಿಪತ್ತಿನಮೇಲೆ ವಿಪತ್ತು. ಈ ವಿಪತ್ತು ಅಪರಿಹಾರ್ಯವಾದುದು. ಕಾರಣ, ಸರಳಕುಮಾರಿಯು ಬದುಕುವ ಭರವಸೆಯು ಇರಲಿಲ್ಲ.

ಅಕಟಕಟ ! ಇದಲ್ಲವೇ ದಾಂಪತ್ಯಪ್ರೇಮವೆಂಬುದು ! ವಿಶ್ವವಿಧಾತನ ಸೃಷ್ಟಿಯಲ್ಲಿ ಇಹಸಂಸಾರದಲ್ಲಿ ಇನ್ನು ಎಂತೆಂತಹ ಆಶ್ಚರ್ಯಕರವಾದ ಪ್ರಾಣಿಗಳು ಜನ್ಮವನ್ನೆತ್ತಿರುವರು? ಇದಕ್ಕಿಂತಲೂ ಭಯಂಕರವಾದ ವ್ಯಾಪಾರವನ್ನು ಮಾಡಲು ಯಾರು ಯಾರು ಸಿದ್ಧರಾಗಿರುವರೋ ? ಮಹಾಪ್ರಪಂಚದ ಏಕದೇಶದಲ್ಲಿ ವಾಸವಾಗಿರುವ ನಾವು ಆವ ವಿಷಯವನ್ನು ತಾನೇ ಬಲ್ಲೆವು ?

---

## ಹನ್ನೊಂದನೆಯ ಸಂಧಿ.

ರಾತ್ರಿ ಸುಮಾರು ಹನ್ನೊಂದು ಗಂಟೆಯಾಗಿರಬಹುದು. ಸರಳಕುಮಾರಿಯು ಮೃತ್ಯುಶಯ್ಯೆಯಲ್ಲಿ ಮಲಗಿರುವಳು. ಇಬ್ಬರು ವೈದ್ಯರು ಎರಡು ಪಕ್ಕಗಳಲ್ಲಿಯೂ ಕುಳಿತುಕೊಂಡು ಚಿಕಿತ್ಸೆಯನ್ನು ಮಾಡುತ್ತಿರುವರು. ವೀರನಾರಾಯಣನೂ ತಲೆಯ ಮೇಲೆ ಕೈಗಳನ್ನಿಟ್ಟುಕೊಂಡು ದಿಕ್ಕುತೋರದವನಾಗಿ ಸಮೀಪದಲ್ಲಿಯೇ ಕುಳಿತಿರುವನು. ಸರಳಕುಮಾರಿಯ ತಲೆಯಕಡೆ ವೀರನಾರಾಯಣನ ಹೆಂಡತಿಯು ಕುಳಿತುಕೊಂಡು ಕಣ್ಣೀರು ಸುರಿಸುತ್ತಿರುವಳು. ನೆರೆಹೊರೆ ಹೆಂಗಸರು ಬಾಗಿಲಸಮೀಪದಲ್ಲಿ ನಿಂತುಕೊಂಡು ಈ ಶೋಚನೀಯವಾದ ಸ್ಥಿತಿಯನ್ನು ನೋಡುತ್ತಿರುವರು.

ವೀರನಾರಾಯಣನು ವೈದ್ಯರನ್ನು ಕುರಿತು—ಈಗ ಹೇಗಿರುವಳು ? ಎಂದು ಕೇಳಿದನು.

ವೈದ್ಯರು ಸರಳೆಯ ನಾಡಿಯನ್ನು ಹಿಡಿದು ನೋಡಿದರು; ಶ್ವಾಸವನ್ನು ಪರೀಕ್ಷಿಸಿ ನೋಡಿದರು. ಬಳಿಕ ವೀರನಾರಾಯಣನ ಕಡೆಗೆ ತಿರುಗಿ—ಮಹಾಶಯ! ನಮ್ಮ ಪ್ರಯತ್ನದಲ್ಲಿ ಏನೂ ಕಡಮೆಯಾಗಲಿಲ್ಲ. ಸರಳೆಯು ಬದುಕುವುದು ದೈವೇಚ್ಛೆಯಲ್ಲಿದ್ದಂತೆ ಕಾಣುವುದಿಲ್ಲ. ಇನ್ನು ಅರ್ಧಘಂಟೆಯೊಳಗಾಗಿ ಸರಳಕುಮಾರಿಯು ಮಾನವಲೀಲೆಯನ್ನು ತ್ಯಾಗಮಾಡಿ ಅನಂತಧಾಮದಲ್ಲಿ ಸೇರಿ ಹೋಗುವಳು, ಎಂದು ಉತ್ತರವಿತ್ತರು.

ಇದನ್ನು ಕೇಳದೊಡನೆಯೇ ವೀರನಾರಾಯಣನ ಹೆಂಡತಿಯು ತಲೆಯನ್ನು ಹೊಡೆದುಕೊಳ್ಳುತ್ತಾ ಆರ್ತನಾದವನ್ನು ಮಾಡಲುಪಕ್ರಮಿಸಿದರು. ಅಲ್ಲಿದ್ದ ಇತರ ಹೆಂಗಸರೂ ಅದರಂತೆಯೇ ಮಾಡತೊಡಗಿದರು. ವೈದ್ಯರು ಇನ್ನು ಅಲ್ಲಿರುವುದು ಸರಿಯಲ್ಲವೆಂದು ತಿಳಿದು ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

ಕೊಂಚಹೊತ್ತಿನೊಳಗಾಗಿಯೇ ಸರಳಕುಮಾರಿಯು ಮರಣಯಾತನೆಯನ್ನು ಅನುಭವಿಸತೊಡಗಿದಳು. ಇದನ್ನು ನೋಡಿ ಸರಳೆಯು ಬದುಕುವುದಿಲ್ಲವೆಂದು ಎಲ್ಲರೂ ತಿಳಿದು ಮೃತ್ಯುಶಯ್ಯೆಯನ್ನು ಹೊರಗೆ ತಂದಿಟ್ಟರು. ಈಸಮಯದಲ್ಲಿ ಎಲ್ಲರಿಗೂ ಉಂಟಾದ ಮರ್ಮವಿದಾರಿಯಾದ ಸಂಕಟವನ್ನು ವರ್ಣಿಸುವುದಕ್ಕೆ ಪರದುಃಖದುಃಖಿತರಾದ ನಮಗೂ ಅಸಾಧ್ಯವು.

ವೀರನಾರಾಯಣನು ಈ ಘೋರವಿಪತ್ತನ್ನು ನೋಡಿ ಸಹಿಸಲಾರದವನಾಗಿ ಸೊಕ್ಕಿ ನೊರಗಿಹೋಗಿ ಬಂದು ಕಡೆಕುಳಿತುಬಿಟ್ಟನು. ಆಗ ಮಿತ್ರನೊಬ್ಬನು ಸಮಿಪಕ್ಕೆ ಬಂದು—ರಾಯರೆ! ನೀವೇತಕೆ ಹೀಗೆ ಅಧೀರರಾಗುವಿರಿ? ಈಕೆಯು ಸತ್ತರೆ, ನಾಳೆ ನಿಮ್ಮ ಹುಡುಗನಿಗೆ ಇವಳಿಗಿಂತಲೂ ರೂಪವತಿಯಾದ ಹೆಣ್ಣನ್ನು ತಂದು ಗಂಟುಹಾಕಬಹುದು. ಈಕೆಯು ಸತ್ತುದೂ ಒಳ್ಳೇಯದೇ ಆಯಿತು. ಇದ

ಕ್ಕಾಗಿ ನೀವು ವ್ಯಸನಪಡುವದು ಧರ್ಮವಲ್ಲ, ಎಂದು ಕಾಲೋಚಿತವಾಗಿ ಮಾತನಾಡಿದನು. ಇದನ್ನು ಕೇಳಿ ವೀರನಾರಾಯಣನು— ಮಹಾಶಯ! ಇಂತಹ ಮಾತನ್ನು ನೀವೆಂದಿಗೂ ಹೇಳಬಾರದು. ಹುಡುಗಿಯರಿಗೆ ಏನು ದಾರಿದ್ರ್ಯ. ಒಂದಲ್ಲದಿದ್ದರೆ ಹತ್ತು ಮದುವೆ ಬೇಕಾದರೂ ಆಗಬಹುದು ನನ್ನ ಬುದ್ಧಿಯಿಲ್ಲದ ಮಗು ಮುಂದಕ್ಕೂ ಈರೀತಿಯಲ್ಲಿಯೇ ನಡೆದುಕೊಳ್ಳುವುದಾದರೆ ನಮ್ಮ ಪರಿಣಾಮವೇನು? ಈಗ ಬಂದಿರುವ ದುರ್ನಾಮವು ನಿವಾರಣೆಯಾಗುವ ಬಗೆ ತಾನೆ ಹೇಗೆ? ಈಯೋಚನೆಯೇ ನನ್ನನ್ನುಸುಟ್ಟು ಬೂದಿಮಾಡುತ್ತಿರುವುದು, ಎಂದು ಹೇಳುತೆ ಹೇಳುತೆ ಅಯ್ಯೋ ಎಂದು ರೋದನಮಾಡಿದನು. ಮಿಕ್ಕವರೆಲ್ಲರೂ ಅವನಂತೆಯೇ ಅಳತೊಡಗಿದರು.

ಸರಳಕುಮಾರಿಯು ಒಂದುಸಲ ಕಣ್ಣನ್ನುತೆರೆದು ಸುತ್ತಲೂ ನೋಡಿ—ಸ್ವಾಮಿ, ಎಂದಳು.

ಒಬ್ಬ ಹೆಂಗಸು ಇದನ್ನು ಕೇಳಿ, ಉನ್ಮತ್ತರಾಘವನನ್ನು ಕರೆತರಲು ಹೊರಟಳು. ಪಾಪಿಷ್ಠನಾದ ಉನ್ಮತ್ತನು ಹೆಂಡತಿಯನ್ನು ನೋಡಲು ಬರದೇ ಹೋದನು. ಆಕೆಯು ಉನ್ಮತ್ತನನ್ನು ನಿಂದಿಸುತ್ತಲೂ, ಸರಳೆಯ ಪತಿಭಕ್ತಿಯನ್ನು ಕೊಂಡಾಡುತ್ತಲೂ ಹಿಂತಿರುಗಿ ಬಂದುಬಿಟ್ಟಳು.

ಸರಳೆಯು ಮತ್ತೊಂದು ಸಲ ಸುತ್ತಲೂ ನೋಡಿದಳು. ಅವಳ ಇಷ್ಟವು ನೆರವೇರದಿರಲು, ಅವಳ ಕಣ್ಣುಗಳಿಂದ ಒಂದೆರಡು ತೊಟ್ಟು ನೀರು ಬಿದ್ದಿತು. ಇದನ್ನು ನೋಡಿ ಪದ್ಮಾವತಿಯು— ಸರಳಾ! ನಿನಗೇನುಬೇಕು? ಎಂದು ಕೇಳಿದಳು.

ಸರಳೆಯು ಮತ್ತೊಂದುಸಲ ನೋಡಿ—ಸ್ವಾಮಿ ಇಲ್ಲ, ಬರಲಿಲ್ಲವೇ ಎಂದಳು.

ಪದ್ಮಾವತಿಯು ಇದನ್ನು ಕೇಳಿ—ಬರುವರು. ನೀನು ಯೋಚಿಸಬೇಡ, ಎನಲಾಗಿ, ಸರಳೆಯು ಮತ್ತೆ—ನಾ ಸಾಯು— ಅವರಿಗೇನು-ಇಲ್ಲ-ಸ್ವಾಮಿ ! ಹಾ ಸ್ವಾಮಿ ! ಎಂದು ಅಸ್ಪಷ್ಟವಾಗಿ ನುಡಿದಳು.

ಎಲ್ಲರೂ ಯಾವ ಮಾತನ್ನೂ ಆಡದೆ ಸುಮ್ಮನೆ ಕುಳಿತಿರಲು ಪುನಃ ಸರಳೆಯು ನುಡಿದಳು—ಈಗಲೂ-ಅವರನ್ನು-ನೋಡುವುದಕ್ಕೆ ಇಲ್ಲವೆ ! ಬೇಡ- ಅವರು- ನನ್ನ- ಮನದಲ್ಲೇ- ಇರುವರು. ಅವರಿಗೆ ಹೇಳಿ- ನಾನು- ಯಾವಾಗಲೂ- ಅವರ- ದಾಸಿ. ಇಹ- ಪರ- ಗಳಲ್ಲಿ ಅವರೇ- ನನಗೆ-ತಾರಕರು. ದೇವರು-ಅವರಿಗೆ- ಮಂಗಳ. ಸ್ವಾಮಿ !

ಸರಳೆಯ ಬಾಯಲ್ಲಿ ಮುಂದೆ ಮಾತು ಹೊರಡಲಿಲ್ಲ. ಕಣ್ಣುಗಳು ಶೂನ್ಯವನ್ನೂ ನೋಡುವುದಕ್ಕೆ ಪ್ರಾರಂಭವಾಯಿತು. ಕೈಕಾಲುಗಳು ತಣ್ಣಗಾದುವು. ಮೇಲುಸಿರು ಕಾಣಿಸಿತು. ಸರಳೆಯು ಕೊನೆಯುಸಲ ಗಟ್ಟಿಯಾಗಿ—ಸ್ವಾಮಿ ! ಕ್ಷಮಿಸು. ಬಂದು- ಸಲ- ದರ್ಶನ- ಕೋಪ- ಬೇಡ- ಸ್ವಾಮಿ ! ಎಂದು ಸುಮ್ಮನಾಗಿಬಿಟ್ಟಳು. ಮುಂದೆ ಅವಳ ಬಾಯಿಂದ ಮಾತು ಹೊರಡದೇ ಹೋಯಿತು. ಪ್ರಾಣವಾಯುವೂ ಹಾರಿಹೋಯಿತು. ಸರಳೆಯ ಮೃತದೇಹವು ಬಣಗಿದ ಹುವ್ವಿನಂತೆ ನೆಲದಮೇಲೆ ಬಿದ್ದುಬಿಟ್ಟಿತು. ಪ್ರಫುಲ್ಲವಾದ ಸುವರ್ಣಲತೆಯು ಅಕಾಲದಲ್ಲಿ ಬಣಗಿಹೋಯಿತು. ಪಾಷಾಣದಂತಿರುವ ಹೃದಯಹೀನನಾದ ಗಂಡನ ಕೈಯ್ಯಲ್ಲಿಬಿದ್ದು ಸರಳೆಯು ಆದವವನ್ನೂ, ಆನಂದವನ್ನೂ, ಆಶೆಯನ್ನೂ ತ್ಯಾಗಮಾಡಿದಳು. ಸರಳೆಯು ಕಷ್ಟಹೊರತಾಗಿ ಸುಖವೆಂಬುವನ್ನು ಕಂಡವಳೇ ಅಲ್ಲ. ಬೇಗನೆ ಮರಣವು ಸಂಭವಿಸಿದ್ದರಿಂದ, ಆಕೆಯು ಸುಖವನ್ನು ಅನುಭವಿಸಿದಳೆಂದೇ ಹೇಳಬೇಕು. ಸಾಧ್ವೀಶಿರೋಮಣಿಯಾದ ಆಕೆಗೆ ಸಲ್ಲೋಕವು ಸಿದ್ಧವಾಗಿರುವುದು. ಆಕೆಯು ಹೋಗತಕ್ಕ ದಾರಿಯುದ್ದಕ್ಕೂ

ಕಲ್ಪವೃಕ್ಷಗಳ ಪುಷ್ಪಗಳೇ ಹಾಸಿರುವವು. ಧರ್ಮವು ತಾನಾಗಿಯೇ ಒಂದು ಹಸ್ತಲಾಘವವನ್ನು ಕೊಟ್ಟು ಸರಳಕುಮಾರಿಯನ್ನು ಕರೆದುಕೊಂಡು ಹೋಗುತ್ತಿರುವುದು. ಇಹ ಸಂಸಾರದ ಪರಿಪರಿಯಾದ ಯಾತನೆಗಳನ್ನು ದೂರಮಾಡಿ, ಸರಳಕುಮಾರಿಯ ಪರಿಶುದ್ಧವಾದ ಆತ್ಮವು ಪರಲೋಕವನ್ನು ಕುರಿತು ತೆರಳಿತು. ಅಲ್ಲಿದ್ದವರೆಲ್ಲರೂ ಗಟ್ಟಿಯಾಗಿ ರೋದನಮಾಡಲಾರಂಭಿಸಿದರು.

ಈ ಸಮಯದಲ್ಲಿ ಉನ್ಮತ್ತನು ಉನ್ಮತ್ತನಂತಾಗಿ ಏಳುತ್ತಾ ಬೀಳುತ್ತಾ ಸರಳೆಯ ಮೃತದೇಹದಬಳಿಗೆ ಬಂದು ಎದೆಯನ್ನೂ ತಲೆಯನ್ನೂ ಹೊಡೆದುಕೊಳ್ಳುತ್ತಾ—ಚಂಡಾಲ! ಯಾರು ನನ್ನ ಸರಳೆಯನ್ನು ಕೊಂದವರು? ಅವರನ್ನು ಇಲ್ಲಿಯೇ ಧ್ವಂಸಮಾಡಿಬಿಡುವೆನು, ಎಂದು ತನ್ನ ಕೈಯ್ಯಲ್ಲಿದ್ದ ದೊಣ್ಣೆಯನ್ನು ತಿರುಗಿಸಲಾರಂಭಿಸಿದನು. ಹತ್ತಾರುಜನರು ಓಡಿಬಂದು ಉನ್ಮತ್ತನಿಗೆ ಹುಚ್ಚುಹಿಡಿದಿದೆ ಎಂದು ಎಲ್ಲರೂ ಉನ್ಮತ್ತನನ್ನು ಹಿಡಿದು ಕಟ್ಟಿದರು. ಇದನ್ನು ನೋಡಿ, ವೀರನಾರಾಯಣನು—ಹೇ ಜಗದೀಶ! ನಿನ್ನ ಇಷ್ಟದಲ್ಲಿ ಇನ್ನು ಏನೇನು ನಡೆಯಬೇಕೋ ನಡೆದುಹೋಗಲಿ. ಹಾ, ದೈವವೆ! ಎಂದು ಬಿದ್ದುಬಿಟ್ಟನು. ವೀರನಾರಾಯಣನ ಈ ಯವಸ್ಥೆಯನ್ನು ನೋಡಿ ಎಲ್ಲರೂ ವ್ಯಸನಪಡುತ್ತಿರುವಲ್ಲಿ, ಉನ್ಮತ್ತರಾಘವನು ತನ್ನ ಬಂಧನವನ್ನು ಕಿತ್ತು; ಬಿಸುಟು ಸರಳಕುಮಾರಿಯ ದೇಹದಮೇಲೆ ಬಿದ್ದು ಹೊರಳಾಡಿದನು. ಇದನ್ನು ಕಂಡು ಜನರು ಹೆಚ್ಚಿನ ಅನರ್ಥಕ್ಕೆ ಅವಕಾಶಕೊಡುವುದು ಅಪಾಯವೆಂದು ತಿಳಿದು, ಉನ್ಮತ್ತನನ್ನು ಎತ್ತಿಕೊಂಡು ಬೇರೊಂದು ಸ್ಥಳಕ್ಕೆ ಹೊರಟುಹೋದರು. ವೀರನಾರಾಯಣನೂ ಅವರ ಹಿಂದೆಹಿಂದೆಯೇ ತೆರಳಿದನು. ಮಿಕ್ಕವರೆಲ್ಲರೂ ಸರಳಕುಮಾರಿಯ ಮೃತದೇಹದ ಹತ್ತಿರವೇ ಕಾದುಬಿದ್ದದ್ದರು.

## ಹನ್ನೆರಡನೆಯ ಸಂಧಿ.

ಲೀಲಾವತಿಯ ವಿಪತ್ತೆಲ್ಲವೂ ಮಾಯವಾಯಿತು. ದೇವಪುರ ದಲ್ಲಿ ಎಲ್ಲರೂ ಏಕತ್ರಸೇರಿರುವರು. ರಾಧಾಮಾಧವರು ಬಂದಿರು ವರು. ಅನಂತಪುರದಿಂದ ಲೀಲಾವತಿಯ ತಾಯಿಯೂ ಬಂದಿರುವಳು. ಅನಂತರಾಮನು ತನ್ನ ಅಳಿಯನ ಮನೆಯಲ್ಲಿಯೇ ವಾಸವಾಗಿದ್ದನು. ಲೀಲಾವತೀ ವಿನಯಕುಮಾರರು ಒಟ್ಟಿಗೆ ಸೇರಿಕೊಂಡು ಪರಮಾ ನಂದದಿಂದ ದಿನಗಳನ್ನು ಕಳೆದರು.

ಒಂದು ದಿನ ಪ್ರಾತಃಕಾಲದಲ್ಲಿ ಅನಂತರಾಮನು ಮನೆಯ ಜಗಲಿಯಮೇಲೆ ಕುಳಿತುಕೊಂಡು ತನ್ನ ಅಳಿಯನಾದ ಜನಾರ್ದನ ನೊಡನೆ ಮಾತನಾಡುತ್ತಿರುವಲ್ಲಿ, ಪುರುಷೋತ್ತಮರಾಯನು ಅಲ್ಲಿಗೆ ಬಂದನು. ಇವನನ್ನು ನೋಡಿದೊಡನೆಯೇ ಅನಂತರಾಮನು ಬಹಳ ಮರ್ಯಾದೆಯಿಂದ ತನ್ನ ಸಮೀಪದಲ್ಲಿ ಕುಳ್ಳಿರಿಸಿ—ಹರೇ ರಾಮ ! ನಿನ್ನನ್ನು ನಾನು ಮತ್ತೆ ನೋಡುವೆನೆಂಬ ಆಶೆಯೇ ಇರಲಿಲ್ಲ. ಈ ದಿನ ನಿನ್ನನ್ನು ನೋಡಿ ನನಗುಂಟಾದ ಆನಂದವು ವರ್ಣಿಸಲಸದಳವು. ನೀನು ಯತ್ನಮಾಡದಿದ್ದರೆ ವಿನಯನು ಸತ್ತೇ ಹೋಗುತ್ತಿದ್ದನು. ನಿನ್ನ ಸಾಹಸದಿಂದಲೇ ಲೀಲಾವತಿಯು ದುಷ್ಟರ ಸಹವಾಸದಿಂದ ಬಿಡುಗಡೆಯನ್ನು ಹೊಂದಿದಳು. ನಿನಗೆ ನಾನು ಯಾವಾಗಲೂ ಕೃತ ಜ್ಞನಾಗಿರುವೆನು, ಎಂದನು.

ಪುರುಷೋತ್ತಮನು—ನೀನೇ ಧನ್ಯ ! ನಿನ್ನ ಮಹತ್ತ್ವವೇ ಶ್ಲಾಘ್ಯ ವಾದುದು ! ನಾನು ನಿನಗೆ ಅತಿಶಯವಾದ ವಂಚನೆಯನ್ನು ಮಾಡಿ ಪಲಾಯನವಾದೆನು. ಇಂತಹ ನನಗೆ ನೀನು ಕೃತಜ್ಞನಾಗಿರುವೆ ನೆಂದು ಹೇಳುವ ಮಾತು ಆಶ್ಚರ್ಯಕರವಾಗಿದೆ. ನಿನ್ನ ಉದಾರಸ್ವಭಾವ ವನ್ನು ಎಷ್ಟುಕೊಂಡಾಡಿದರೂ ಸ್ವಲ್ಪವೇ.

ಅನಂತರಾಮ—ನೀನು ನನಗೆ ವಂಚನೆಮಾಡಿದೆಯೆಂದು ತಿಳಿದಿ ರುವೆ. ನೀನು ಯಾವುದನ್ನು ವಂಚನೆಯೆಂದು ತಿಳಿದಿರುವೆಯೋ ಅದೇ ನನಗೆ ಮಹೋಪಕಾರವಾಗಿ ಪರಿಣಮಿಸಿತು. ಅದನ್ನು ನಿನಗೆ ಸಾವಕಾಶವಾಗಿ ತಿಳಿಸುವೆನು.

ಹೀಗೆಹೇಳಿ, ಅನಂತನು ಲೀಲಾವತೀ ವಿನಯಕುಮಾರರನ್ನು ಕರೆದು ಮಹಾತ್ಮನಾದ ಹರೀರಾಮನಿಗೆ ಪ್ರಣಾಮವನ್ನು ಮಾಡು ವಂತೆ ಹೇಳಿದನು. ಅವರಿಬ್ಬರೂ ಆನಂದದಿಂದ ನಮಸ್ಕಾರಮಾಡಿ ದರು. ನಿಮ್ಮಗಳ ಮನೋರಥವು ಕೈಗೂಡಲಿ ಎಂದು ಹರೀರಾಮನು ಆಶೀರ್ವಾದಮಾಡಿದನು. ಬಳಿಕ ನವವಧೂವರರು ರಾಧಾಮಾಧವ ರಿಗೆ ಅಡ್ಡಬಿದ್ದು ಕಾಲೋಚಿತವಾದ ಮಂಗಳಾಶಾಸನವನ್ನು ಕೈ ಗೊಂಡು ತಲೆವಾಗಿ ನಿಂತರು. ಪುರುಷೋತ್ತಮನು ಅನಂತನನ್ನು ಕುರಿತು—ಮಹಾಶಯ! ರಾಧಾಮಾಧವರು ನಿನಗೆ ಅಪರಿಚಿತರಂತೆ ಕಾಣಿಸಿಕೊಳ್ಳುವರು. ಬಹಳಕಾಲದಿಂದಲೂ ಪರಸ್ಪರಮುಖಾ ವಲೋಕನವಿಲ್ಲದ್ದರಿಂದ ಸಂಬಂಧವು ದೂರತೊಲಗಿದಂತೆ ಕಾಣುವುದು. ನಾನು ಎಲ್ಲವನ್ನೂ ಪರಿಶೀಲಿಸಿ ನೋಡಿರುವೆನು. ರಾಧೆಯು ನಿನ್ನ ದೊಡ್ಡತಂದೆಯ ಮಗನ ಮಗಳು, ಎನಲಾಗಿ, ಅನಂತನು ರಾಧೆಯನ್ನು ನೋಡಿ ಮಗು, ನೀನು ಬಾಲಗೋಪಾಲನ ಮಗಳೆ? ಕಾರಣಾಂತರ ದಿಂದ ನಾನು ಬಾಲಗೋಪಾಲನನ್ನು ಬಹಳಕಾಲ ನೋಡಲೇಯಿಲ್ಲ. ಇಂದು ನಾನೇ ಧನ್ಯನು. ಎಂದು ಆಕೆಯ ಬೆನ್ನಿನಮೇಲೆ ಕೈಯಿಂದ ಸವರಿದನು. ರಾಧಾಮಾಧವರು ಹೇಳಲಸಾಧ್ಯವಾದ ಸಂತೋಷದಿಂದ ಅನಂತರಾಮನಿಗೆ ನಮಸ್ಕರಿಸಿದರು.

ಮರುದಿನ ಬೆಳಗಿನ ಮುಹೂರ್ತದಲ್ಲಿ ವಿವಾಹವು ನಿಶ್ಚಿತವಾಗಿ ಎಲ್ಲವೂ ಸಿದ್ಧವಾದುವು. ಆತ್ಮೀಯರೆಲ್ಲರೂ ಬಂದರು. ಮಹಾ ವಿಜೃಂಭಣೆಯಿಂದ ವಿವಾಹ ಮಹೋತ್ಸವವು ನಡೆಯಿತು. ರಾಧೆ

ಮಾಧವರೇ ಕನ್ಯಾದಾನವನ್ನು ಮಾಡಿದರು. ಬಳಿಕ ಮಾಧವನು ವಧೂವರರಿಗೆ ಆಶೀರ್ವದಿಸಿ ಇಂತೆಂದನು—ನಿಮ್ಮ ರೂಪಾನುರೂಪ ಘಟನೆಯು ಇಂದಿಗೆ ಸಫಲವಾಯಿತು. ನಿಮ್ಮಗಳ ಪ್ರೇಮವೆಂಬುದು ವಿನಾಶವಿಲ್ಲದ ಸ್ವರ್ಗೀಯವಾದ ಸಾಮಗ್ರಿಯಾಗಿರುವದು. ಈ ಪ್ರೇಮಕ್ಕೆ ಕಾಲತ್ರಯದಲ್ಲಿಯೂ ಸಾಮರಸ್ಯವಿದ್ದೇ ಇರುವುದು. ವಿಧಿವಿಲಾಸದಿಂದ ಈ ಕುಸುಮದ್ವಯವು ಏಕತ್ರ ಪ್ರಕಾಶಿತವಾಗುವುದಕ್ಕೆ ಅನುಕೂಲಿಸಲಿಲ್ಲ. ಈಗ ನಾವು ಪುಷ್ಪದ್ವಯವನ್ನು ಒಂದೆಡೆಯಲ್ಲಿ ಸೇರಿಸಿರುವೆವು. ಪರಮಾತ್ಮನು ನಿಮ್ಮಗಳನ್ನು ಚಿರಕಾಲಸುಖಿವಾಗಿಟ್ಟಿರಲಿ.

ಜನಾರ್ದನನು ಆಶೀರ್ವಾದ ಮಾಡಿದನು:—ಲೀಲಾವತಿ! ಪತ್ನಿಯು ಪತಿಯ ವಿಷಯದಲ್ಲಿ ಹೇಗಿರಬೇಕೆಂಬುದನ್ನು ನಾನು ನಿನಗೆ ತಿಳಿಯ ಹೇಳಬೇಕಾಗಿಲ್ಲ. ಆದರೂ ಒಂದೆರಡು ಮಾತುಗಳನ್ನು ಹೇಳುವೆನು. ಸ್ವಾಮಿಯ ಚರಣದರ್ಶನದಿಂದ ಸತಿಗೆ ಸಲ್ಲೋಕಗಳುಂಟು. ಸಂಸಾರ ಸಾಗರವನ್ನು ದಾಟುವುದಕ್ಕೆ ಸ್ವಾಮಿಯ ಚರಣಗಳೇ ಸಾಧಕಗಳು. ಸ್ವಾಮಿಯ ಪಾದೋದಕ ಪಾನದಿಂದ ಸತಿಗೆ ಪುನರ್ಜನ್ಮವಿಲ್ಲ. ಸ್ವಾಮಿಯು ಸತಿಗೆ ಸರ್ವಸ್ವ ಸ್ವರೂಪನು, ಆಭರಣಕ್ಕೆ ಆಭರಣಪ್ರಾಯನು. ಸ್ವಾಮಿಯು ಸುಖಿತನಾದರೆ ಸಂಸಾರವು ಸ್ವರ್ಗಕ್ಕಿಂತಲೂ ಅಧಿಕವು; ಆತನು ದುಃಖಿತನಾಗುವುದಾದರೆ ಸಂಸಾರವು ನಿಸ್ಸಾರವಾಗಿ ನರಕಕೂಪದಂತಾಗುವುದು. ಲೀಲಾ! ಸ್ತ್ರೀಯು ಸ್ವಾಮಿಗೆ ಹಿತೈಷಿಣಿಯಾದ ಸಖಿಯು; ಸ್ವಾಮಿಯು ಸತಿಗೆ ಹಿತೈಷಿಯಾದ ಸಖನು. ಸಂಸಾರಸುಖ ದುಃಖಗಳು ಪತಿಪತ್ನಿಯರಿಬ್ಬರಿಗೂ ಸಂಬಂಧಪಟ್ಟವು. ಹೆಂಗಸು ದಾಸಿಯೆಂದೂ, ಗಂಡಸು ಪ್ರಭುವೆಂದೂ ಸೇವ್ಯಸೇವಕಭಾವದಿಂದ ಸಂಸಾರ ಯಾತ್ರೆಯು ನಡೆಯುವುದಾದರೆ ನಿರ್ದಿಷ್ಟವಾದ ಸುಖವು ಉಂಟಾಗುವುದಿಲ್ಲ. ಸಂಸಾರದಲ್ಲಿ ಸ್ತ್ರೀ

ಸ್ತ್ರೀಪುರುಷರು ಇಬ್ಬರೂ ಸಮಾನರು. ಅವರಲ್ಲಿ ಶ್ರೇಷ್ಠ ಕನಿಷ್ಠಗಳೆಂಬ ಭೇದವು ಎಂದಿಗೂ ಇರತಕ್ಕದ್ದಲ್ಲ. ಪ್ರೇಮಪಾಶವು ಇಬ್ಬರನ್ನೂ ಸಮಾನವಾಗಿಯೇ ಕಟ್ಟಿಹಾಕಿರುವುದು. ಪ್ರೇಮಪಾಶಬದ್ಧರಾದ ಪತಿ ಪತ್ನಿಯರಿಬ್ಬರೂ ಸಂಸಾರವಲ್ಲಿ ಧರ್ಮವೆಂಬ ಸೇತುವನ್ನು ಕಟ್ಟಿ ಇಹ ಲೋಕದಿಂದ ಪರಲೋಕಕ್ಕೆ ತೆರಳಬೇಕು. ಲೀಲಾವತೀ ವಿನಯ ಕುಮಾರ! ಧರ್ಮ ಸೂಕ್ಷ್ಮವನ್ನರಿತು ಸಂಸಾರವನ್ನು ನಿರ್ವಹಿಸ ಬೇಕು. ಸುಖದುಃಖಗಳಲ್ಲಿ ನೀವಿಬ್ಬರೂ ಭಾಗಿಗಳಾಗಿ ಲೋಕ ನಿಂದೆಗೆ ಪಾತ್ರರಾಗದಿರಬೇಕು. ಪರಸ್ಪರ ಪ್ರಣಯಕ್ಕೆ ಎಂದಿ ಗೂ ಕುಂದುಬಾರದಂತೆ ರಕ್ಷಿಸಿಕೊಳ್ಳುವುದೇ ಸಂಸಾರರಹಸ್ಯದ ಮೂಲಮಂತ್ರವು. ದೇವರು ನಿಮಗೆ ಯಾವಾಗಲೂ ಮಂಗಳ ವನ್ನುಂಟುಮಾಡಲಿ.

ವಿವಾಹಕ್ಕೆ ಬಂದಿದ್ದವರೆಲ್ಲರೂ ತಂತಮ್ಮ ಯೋಗ್ಯತಾನುಸಾ ರ ವಧೂವರರಿಗೆ ಆಶೀರ್ವಾದ ಮಾಡಿ ಮಿಷ್ಟಾನ್ನ ಭೋಜನಾದಿಗಳನ್ನು ತೀರಿಸಿಕೊಂಡು ಯಥಾಯಥಾ ತೆರಳಿದರು.

---

## ಉಪಸಂಹಾರ.

ಸೆಷನ್ ಕೋರ್ಟಿನಲ್ಲಿ ಉನ್ಮತ್ತನು ಹುಚ್ಚನೆಂದು ಇತ್ಯರ್ಥ ವಾಗಿ ಉನ್ಮತ್ತಾಲಯಕ್ಕೆ ಕಳುಹಿಸಲ್ಪಟ್ಟನು. ಕರಾಳರಾಯನಿಗೆ ಏಳು ವರ್ಷ ಕಠಿಣ ಸಜಾ ವಿಧಿಸಲ್ಪಟ್ಟಿತು.

ವೀರನಾರಾಯಣನು ಸಂಸಾರವಲ್ಲಿ ಬೇಸರಪಟ್ಟವನಾಗಿ ತನ್ನ ಸರ್ವಸ್ವವನ್ನೂ ಲೀಲಾವತೀ ವಿನಯಕುಮಾರರಿಗೆ ಧಾರೆಯೆರೆದು, ಹೆಂಡತಿಯೊಡನೆ ಕಾಶೀವಾಸಿಯಾದನು. ವಿನಯನು ರಾಧಾವಸಂಧಷ

ರನ್ನು ತನ್ನ ಸಮೀಪದಲ್ಲಿಯೇ ಇಟ್ಟುಕೊಂಡನು. ಅವರಿಗೆ ಬೇಕಾದ ಹಾಗೆ ಉಪಕಾರಮಾಡಿದನು. ಪುರುಷೋತ್ತಮನೆಂಬ ನಾಮಾಂತರವನ್ನು ಧಾರಣಮಾಡಿದ್ದ ಹರೇರಾಮನು ಅನಂತಪುರದ ಕಾರ್ಯಭಾರವನ್ನು ತಾನೇ ವಹಿಸಿ ಆ ಗ್ರಾಮವನ್ನು ಉನ್ನತಸ್ಥಿತಿಗೆ ತಂದು ಎಲ್ಲರ ಗೌರವಕ್ಕೂ ಪಾತ್ರನಾದನು. ಲೀಲಾವತೀ ವಿನಯಕುಮಾರರನ್ನು ಗ್ರಾಮನಿವಾಸಿಗಳೆಲ್ಲರೂ ದೇವತೆಗಳೆಂದು ಭಾವಿಸಿ ಪೂಜಿಸುತಿದ್ದರು.

ಲೀಲಾವತೀ ವಿನಯಕುಮಾರರ ದಾಂಪತ್ಯವು ಲೋಕಕ್ಕೆ ಆದರ್ಶಸ್ವರೂಪವಾದುದು. ಅವರ ಪ್ರಣಯವೇ ಪರಮಪವಿತ್ರವು. ಇಂತಹ ಸಂಸಾರವು ಚಿರಕಾಲ ಸುಖದಿಂದಿರಲಿ.

